# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 1681
**ಮಾನ್ಯ ಸದಸ್ಯರ ಹೆಸರು** : ಶ್ರೀ ಹೆಚ್.ಎಂ.ರಮೇಶ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು)
**ಉತ್ತರಿಸಬೇಕಾದ ದಿನಾಂಕ** : 14-03-2022
**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ, ಜೀವಿಶಾಸ್ತ್ರ ಮತ್ತು ಪರಿಸರ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ | | |
|---|---|---|---|---|
| ಅ) | ಪ್ರವಾಸೋದ್ಯಮ ಇಲಾಖೆಯಲ್ಲಿ ಪ್ರಸ್ತುತ ಎಷ್ಟು ಯೋಜನೆಗಳು ಇವೆ; ಅವುಗಳು ಯಾವುವು; (ಯೋಜನಾವಾರು ಮಾಹಿತಿ ನೀಡುವುದು) | ಪ್ರವಾಸೋದ್ಯಮ ಇಲಾಖೆಯಿಂದ ಪ್ರವಾಸಿಗರ ಅನುಕೂಲಕ್ಕಾಗಿ ರೂಪಿಸಿರುವ ಪ್ರಮುಖ ಯೋಜನೆಗಳ ವಿವರ ಹಾಗೂ ಮಾನದಂಡಗಳ ವಿವರ ಈ ಕೆಳಕಂಡಂತಿದೆ:- | | |
| ಆ) | ಈ ಎಲ್ಲಾ ಯೋಜನೆಗಳನ್ನು ಪಡೆಯಲು ಇರುವ ಮಾನದಂಡಗಳೇನು; (ಯೋಜನಾವಾರು ಮಾಹಿತಿ ನೀಡುವುದು) | **ಯೋಜನೆಗಳು** | **ವಿವರ** | **ಮಾನದಂಡಗಳು** |
| | | ಬಂಡವಾಳ ವೆಚ್ಚಗಳು | ಪ್ರವಾಸಿ ತಾಣಗಳಲ್ಲಿ ಪ್ರವಾಸಿಗರ ಅನುಕೂಲಕ್ಕಾಗಿ ಯಾತ್ರಿನಿವಾಸ/ ಡಾರ್ಮಿಟರಿ, ಕುಡಿಯುವ ನೀರು, ಶೌಚಾಲಯ ಇತ್ಯಾದಿ ಮೂಲಸೌಲಭ್ಯಗಳ ಅಭಿವೃದ್ಧಿ. | • ಮಾನ್ಯ ಶಾಸಕರು, ಸಚಿವರು ಇತರೆ ಜನಪ್ರತಿನಿಧಿಗಳು ಮತ್ತು ಸಂಘ-ಸಂಸ್ಥೆಗಳಿಂದ ಸ್ವೀಕೃತವಾಗುವ ಪ್ರವಾಸಿ ಮೂಲಸೌಲಭ್ಯಗಳ ಪ್ರಸ್ತಾವನೆ ಸಂಬಂಧ ಜಿಲ್ಲಾಧಿಕಾರಿಗಳು/ ಇಲಾಖೆಯ ಉಪನಿರ್ದೇಶಕರು/ ಸಹಾಯಕ ನಿರ್ದೇಶಕರವರಿಂದ ಈ ಕೆಳಕಂಡಂತೆ ವರದಿ ಪಡೆಯಲಾಗುವುದು.<br>• ಪ್ರವಾಸಿ ತಾಣಕ್ಕೆ ಭೇಟಿ ನೀಡುವ ಪ್ರವಾಸಿಗರ ಅಂಕಿ-ಅಂಶ.<br>• ಪ್ರವಾಸಿ ತಾಣದ ಚಾರಿತ್ರಿಕ ಸಾಂಸ್ಕೃತಿಕ, ಪಾರಂಪರಿಕ, ಐತಿಹಾಸಿಕ ಮಹತ್ವ.<br>• ಯಾತ್ರಿನಿವಾಸ/ ಡಾರ್ಮಿಟರಿ ನಿರ್ಮಾಣ ಮಾಡಲು ಅಗತ್ಯವಿರುವ ಜಮೀನನ್ನು ಇಲಾಖೆಯ ಹೆಸರಿಗೆ ಹಕ್ಕಿನ ಸಮೇತ ವರ್ಗಾಯಿಸುವುದು.<br>• ಅನುದಾನದ ಲಭ್ಯತೆ. |
| | | ಕೆಟಿವಿಜಿ | ಕರ್ನಾಟಕ ಟೂರಿಸಂ ವಿಷನ್ ಗ್ರೂಫ್ ಶಿಫಾರಸ್ಸಿನಡಿ ಕೈಗೊಳ್ಳುವ ಕಾಮಗಾರಿಗಳು | • ಕರ್ನಾಟಕ ಟೂರಿಸಂ ವಿಷನ್ ಗ್ರೂಪ್ ನೀಡುವ ಶಿಫಾರಸ್ಸುಗಳನ್ವಯ ಪ್ರವಾಸಿ ತಾಣಗಳಲ್ಲಿ ಪ್ರವಾಸಿ ಸೌಲಭ್ಯಗಳ ಅಭಿವೃದ್ಧಿ. |
| | | ನಬಾರ್ಡ್ | ಕೂಡು ರಸ್ತೆಗಳ ಅಭಿವೃದ್ಧಿ | • ಪ್ರವಾಸಿ ತಾಣಗಳನ್ನು ಸಂಪರ್ಕಿಸುವ ಕೂಡು ರಸ್ತೆಗಳ ಅಭಿವೃದ್ಧಿ. |
| | | ಎಸ್.ಸಿ.ಎಸ್.ಪಿ/ ಟಿ.ಎಸ್.ಪಿ ಯೋಜನೆ ಹಾಗೂ ಸಾಮಾನ್ಯ ಯೋಜನೆ | ಕರ್ನಾಟಕ ದರ್ಶನ ಪ್ರವಾಸ ಕಾರ್ಯಕ್ರಮ | • ಎಸ್.ಸಿ.ಎಸ್.ಪಿ. / ಟಿ.ಎಸ್.ಪಿ ಯೋಜನೆಯಡಿ ಸರ್ಕಾರಿ ಪ್ರೌಢ ಶಾಲೆಗಳಲ್ಲಿ, ಮೊರಾರ್ಜಿ ಮತ್ತು ಕ್ರೈಸ್ಟ್ ವಸತಿ ಶಾಲೆಗಳಲ್ಲಿ ಕಲಿಯುತ್ತಿರುವ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ 8ನೇ ತರಗತಿ ವಿದ್ಯಾರ್ಥಿಗಳಿಗೆ ಹಾಗೂ ಸಾಮಾನ್ಯ ಯೋಜನೆ ಅಡಿ ಹಿಂದುಳಿದ ಹಾಗೂ |

| | | | | |
|---|---|---|---|---|
| | | | | ಅಲ್ಪಸಂಖ್ಯಾತ ಮತ್ತು ಇತರ ವರ್ಗಕ್ಕೆ ಸೇರಿದ 8ನೇ ತರಗತಿ ವಿದ್ಯಾರ್ಥಿಗಳಿಗೆ (ತಲಾ ರೂ.3,500/) ಕರ್ನಾಟಕ ದರ್ಶನ ಉಚಿತ ಪ್ರವಾಸ ಕಾರ್ಯಕ್ರಮ. ಈ ಕಾರ್ಯಕ್ರಮದ ಸಂಬಂಧ ಸರ್ಕಾರ ಹೊರಡಿಸಿರುವ ಮಾನದಂಡಗಳನ್ನು **ಅನುಬಂಧ-1** ರಲ್ಲಿ ಒದಗಿಸಿದೆ. |
| ಇ) | ಪ್ರಸ್ತುತ ಮಂಜೂರಾದ ಫಲಾನುಭವಿಗಳಿಗೆ ನೀಡುತ್ತಿರುವ ಸಹಾಯಧನ ಎಷ್ಟು; (ಯೋಜನಾವಾರು ಸಂಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ಪ್ರವಾಸೋದ್ಯಮ ನೀತಿ 2020-26 ರಡಿಯಲ್ಲಿ ಈ ಕೆಳಕಂಡ ಪ್ರವಾಸೋದ್ಯಮ ಉತ್ಪನ್ನಗಳಿಗೆ ಸಂಬಂಧಿಸಿದ ನೂತನ ಪ್ರವಾಸೋದ್ಯಮ ಯೋಜನೆಗಳು ಮತ್ತು ವಿಸ್ತರಣಾ ಪ್ರವಾಸೋದ್ಯಮ ಯೋಜನೆಗಳು ಮಾತ್ರವೇ ಬಂಡವಾಳ ಹೂಡಿಕೆ ಸಹಾಯಧನವನ್ನು ಪಡೆಯಲು ಅರ್ಹರಾಗಿರುತ್ತಾರೆಂದು ಪ್ರಸ್ತಾಪಿಸಲಾಗಿದೆ.<br>1. ಸಾಹಸ (ಅಡ್ವೆಂಚರ್) ಪ್ರವಾಸೋದ್ಯಮ ಯೋಜನೆ<br>2. ಕಾರವಾನ್ ಪಾರ್ಕ್ ಯೋಜನೆ<br>3. ಕಾರವಾನ್ ಪ್ರವಾಸೋದ್ಯಮ ಯೋಜನೆ<br>4. ಹೋಟೆಲ್ ಪ್ರವಾಸೋದ್ಯಮ ಯೋಜನೆ ಬಜೆಟ್ (1-star or 2 star classification hotels/resorts)<br>5. ಹೋಟೆಲ್ ಯೋಜನೆ ಪ್ರೀಮಿಯಂ (Premium- 3 star and above classification hotels/resorts)<br>6. ಹೌಸ್‌ಬೋಟ್ ಯೋಜನೆ<br>7. ರಸ್ತೆ ಬದಿಯ (ವೇಸೈಡ್) ಸೌಕರ್ಯಗಳು<br>8. ಸ್ವಾಸ್ಥ್ಯ ಕೇಂದ್ರ (wellness centres)<br>ಈ ಮೇಲ್ಕಂಡ ಯೋಜನೆಗಳಿಗೆ ಸಹಾಯಧನ ನೀಡುತ್ತಿರುವ ಅರ್ಹ ಯೋಜನಾ ಮೊತ್ತ ಮತ್ತು ಸಹಾಯಧನದ ವಿವರಗಳನ್ನು **ಅನುಬಂಧ-2** ರಲ್ಲಿ ಒದಗಿಸಿದೆ. | | |
| ಈ) | ಕಳೆದ ಮೂರು ವರ್ಷಗಳಿಂದ ಮಂಜೂರಾದ ಫಲಾನುಭವಿಗಳಿಗೆ ಎಷ್ಟು ಸಹಾಯಧನ/ ಸಬ್ಸಿಡಿ ನೀಡಲಾಗಿದೆ; | ಪ್ರವಾಸೋದ್ಯಮ ಇಲಾಖೆಯು ಮತಕ್ಷೇತ್ರವಾರು ಅನುದಾನ ಬಿಡುಗಡೆ ಮಾಡುವುದಿಲ್ಲ.<br>2018-19 ಮತ್ತು 2019-20ನೇ ಸಾಲುಗಳಲ್ಲಿ ಪ್ರವಾಸಿ ಟ್ಯಾಕ್ಸಿ ಸಹಾಯಧನ ವಿತರಣೆ ಯೋಜನೆಯಡಿ ಮಂಜೂರಾದ ಜಿಲ್ಲಾವಾರು ಫಲಾನುಭವಿಗಳಿಗೆ ವಿತರಿಸಿರುವ ಸಹಾಯಧನದ ವಿವರಗಳನ್ನು **ಅನುಬಂಧ-3**ರಲ್ಲಿ ಒದಗಿಸಿದೆ. 2020-21ನೇ ಸಾಲಿನಲ್ಲಿ ಪ್ರವಾಸಿ ಟ್ಯಾಕ್ಸಿ ಸಹಾಯಧನ ವಿತರಿಸುವ ಕಾರ್ಯಕ್ರಮವನ್ನು ಇಲಾಖೆಯು ಹಮ್ಮಿಕೊಂಡಿರುವುದಿಲ್ಲ. | | |
| ಉ) | ಎಲ್ಲಾ ಯೋಜನೆಗಳ ಕ್ಷೇತ್ರವಾರು, ಫಲಾನುಭವಿವಾರು ವಿವರ ನೀಡುವುದು? | ಕಳೆದ ಮೂರು ವರ್ಷಗಳಲ್ಲಿ 2009-14 ಮತ್ತು 2015-20ರ ಪ್ರವಾಸೋದ್ಯಮ ನೀತಿಗಳಡಿ ಜಿಲ್ಲಾವಾರು ಬಿಡುಗಡೆ ಮಾಡಿರುವ ಸಹಾಯಧನದ ವಿವರವನ್ನು **ಅನುಬಂಧ-4**ರಲ್ಲಿ ಒದಗಿಸಿದೆ. | | |

**TOR 107 TDV 2022**

(ಆನಂದ್ ಸಿಂಗ್)
ಪ್ರವಾಸೋದ್ಯಮ,
ಜೀವಿಶಾಸ್ತ್ರ, ಮತ್ತು ಪರಿಸರ ಸಚಿವರು

# ಪ್ರಶ್ನೆ ಸಂಖ್ಯೆ : 1681 ಕ್ಕೆ ಅನುಬಂಧ-1

## 2016-17ನೇ ಸಾಲಿನಲ್ಲಿ ಪರಿಶಿಷ್ಟ ಜಾತಿಯ ಹಾಗೂ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಕರ್ನಾಟಕ ದರ್ಶನ ಪ್ರವಾಸ ಕೈಗೊಳ್ಳುವ ಸಂಬಂಧ ಸಿದ್ಧಪಡಿಸಿರುವ ಮಾರ್ಗಸೂಚಿಗಳು

ಕರ್ನಾಟಕ ದರ್ಶನದ ಸಾಮಾನ್ಯ ಉದ್ದೇಶಗಳು :-

- ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳು ಪರಿಪೂರ್ಣವಾಗಿ ರಾಜ್ಯದಲ್ಲಿರುವ ಮುಖ್ಯವಾದ ಪ್ರವಾಸಿ ಸ್ಥಳಗಳು ಅಂದರೆ ಸ್ಥಳೀಯ ವೈಜ್ಞಾನಿಕ, ಧಾರ್ಮಿಕ, ಭೌಗೋಳಿಕ, ನೈಸರ್ಗಿಕ, ಐತಿಹಾಸಿಕ, ವಿಜ್ಞಾನ ಮತ್ತು ಕೈಗಾರಿಕೆಗಳು, ಉತ್ತಮ ಶಾಲೆ, ಆಕಾಶವಾಣಿ ಕೇಂದ್ರ, ಗಣಿಗಳು, ಉದ್ಯಾನವನ, ಮ್ಯೂಸಿಯಂ, ಪ್ರಖ್ಯಾತ ವ್ಯಕ್ತಿಗಳು ಹುಟ್ಟಿದ ಊರು ಇತ್ಯಾದಿಯನ್ನು ಅರಿಯುವುದು.
- ಮಕ್ಕಳು ತಮ್ಮ ಶೈಕ್ಷಣಿಕ ಜೀವನವನ್ನು ರೂಪಿಸಿಕೊಳ್ಳಲು ಸಹಕಾರಿಯಾಗುವಂತೆ ಮಾರ್ಗದರ್ಶನವನ್ನು ನೀಡುವುದು.
- ಮಕ್ಕಳಲ್ಲಿ ಸಹಕಾರ, ಹೊಂದಾಣಿಕೆ, ನಾಯಕತ್ವ ಮನೋಭಾವವನ್ನು ಬೆಳೆಸುವುದು.
- ಕರ್ನಾಟಕ ಸಾಂಸ್ಕೃತಿಕ ಪರಂಪರೆಯ ಅರಿವು ಹಾಗೂ ಅಭಿವೃದ್ಧಿಗೊಳಿಸುವಲ್ಲಿ ಮಕ್ಕಳ ಭಾಗವಹಿಸುವಿಕೆಯನ್ನು ಪ್ರೋತ್ಸಾಹಿಸುವುದು.
- ಕರ್ನಾಟಕ ಸಾಮಾಜಿಕ ಸ್ಥಿತಿಗತಿಯ ಕುರಿತು ಅರಿವುಂಟು ಮಾಡುವುದು.
- ಮಕ್ಕಳಿಗೆ ನೈಜ ಪರಿಸರದ ದರ್ಶನ ಮಾಡಿಸುವುದು.
- ತರಗತಿ ಕಲಿಕೆಗೆ ಪೂರಕವಾದ ಮಾಹಿತಿ ಒದಗಿಸುವುದು.
- ಶಾಲಾ ಚಟುವಟಿಕೆಗಳನ್ನು, ಹೊರಪ್ರಪಂಚ ಹಾಗೂ ಸಮಾಜದೊಂದಿಗೆ ಸಮನ್ವಯಗೊಳಿಸುವುದು.
- ಕರ್ನಾಟಕ ಐತಿಹಾಸಿಕ ವಿಷಯಗಳ ನೈಜ ಸ್ಥಿತಿಯ ದರ್ಶನ ಮಾಡಿಸುವುದು.
- ಪ್ರಾದೇಶಿಕ ಮಟ್ಟದ ಜನಜೀವನ, ಭಾಷೆ, ಆಚಾರ ವಿಚಾರಗಳಲ್ಲಿನ ವೈವಿಧ್ಯತೆಯ ಅರಿವುಂಟು ಮಾಡುವುದು.

ನಿರ್ದಿಷ್ಟ ಉದ್ದೇಶಗಳು :-

- ಮಕ್ಕಳು ಶಿಕ್ಷಣದಲ್ಲಿ ಆಸಕ್ತಿ ಬೆಳೆಸಿಕೊಂಡು ಪಠ್ಯೇತರ ಹಾಗೂ ಶೈಕ್ಷಣಿಕ ಚಟುವಟಿಕೆಗಳಲ್ಲಿ ಹೆಚ್ಚು ಉತ್ಸಾಹದಿಂದ ಭಾಗವಹಿಸುವುದು. ಮಕ್ಕಳು ಶಾಲೆಯತ್ತ ಹೆಚ್ಚು ಆಕರ್ಷಿತರಾಗಿ ಶಾಲೆ ಬಿಡುವ ಸಾಧ್ಯತೆಗಳು ಕಡಿಮೆಯಾಗುವುದು.
- ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಗಂಡು ಮಕ್ಕಳು ಹಾಗೂ ಹೆಣ್ಣು ಮಕ್ಕಳು ರಾಜ್ಯದ ಅನೇಕ ಸ್ಥಳಗಳ ನೈಜ ಪರಿಸರ ದರ್ಶನ ಪಡೆಯಲು ಸಹಕಾರಿಯಾಗುವುದು.
- ಮಕ್ಕಳ ಕೀಳರಿಮೆ ಹೋಗಲಾಡಿಸುವುದು.
- ಮಕ್ಕಳಲ್ಲಿ ಸ್ಪರ್ಧಾತ್ಮಕ ಮನೋಭಾವ ಬೆಳೆಸುವುದು.
- ಮಕ್ಕಳಲ್ಲಿ ಪಠ್ಯವಸ್ತುವಿನ ಸಾಮರ್ಥ್ಯಗಳ ಬೆಳವಣಿಗೆಗೆ ಸಹಕಾರಿಯಾಗುವುದು.
- ವಿದ್ಯಾರ್ಥಿಗಳಲ್ಲಿ ವೀಕ್ಷಣೆ, ಮೌಖಿಕ ಹಾಗೂ ಲಿಖಿತ ಕೌಶಲ್ಯಗಳ ಸಂವರ್ಧನೆ ಮಾಡುವುದು.

...2

- ನೋಡಿ ಕಲಿಯುವುದರಿಂದ ಅನೇಕ ಪರಿಕಲ್ಪನೆಗಳು ಸ್ಪಷ್ಟವಾಗುವುದು.
- ಮಕ್ಕಳ ಯೋಚನಾ ಶಕ್ತಿಯನ್ನು ವಿಶಾಲಗೊಳಿಸುವುದು.
- ರಾಜ್ಯದ ಸಂಸ್ಕೃತಿ, ಕಲೆ, ದೇಶಭಕ್ತಿ, ವೈಚಾರಿಕತೆ ಬಗ್ಗೆ ಅರಿವು ಮೂಡಿಸುವುದು.

ಮಕ್ಕಳಿಗೆ ಸರ್ವತೋಮುಖ ಬೆಳವಣಿಗೆಗೆ ಸಹಕಾರಿಯಾಗುತ್ತದೆ. ಮಕ್ಕಳ ದಾಖಲಾತಿ, ಹಾಜರಾತಿ ಉತ್ತಮವಾಗುತ್ತದೆ. ಒಟ್ಟಾರೆ ಗುಣಮಟ್ಟದ ಶಿಕ್ಷಣ ನೀಡುವ ದಿಸೆಯಲ್ಲಿ ಎಲ್ಲಾ ಮಕ್ಕಳಲ್ಲಿ ಉತ್ಸಾಹ ತುಂಬುವುದಾಗಿದೆ. ಯೋಜನೆಯ ಲಾಭವು ನೇರವಾಗಿ ಮಕ್ಕಳಿಗೆ ತಲುಪುವುದರಿಂದ ಔಚಿತ್ಯಪೂರ್ಣವಾಗಿದ್ದು, ಪೋಷಕರು ಹಾಗೂ ಸಮುದಾಯದ ಸಹಕಾರವನ್ನು ಸಹ ಗಳಿಸಬಹುದಾಗಿದೆ ಎಂದು ಅಭಿಪ್ರಾಯ ಪಡಲಾಗಿದೆ.

**<u>ಘಟಕ ವೆಚ್ಚದ ವಿವರ</u> :-**

ಪ್ರತಿ ಜಿಲ್ಲೆಯಲ್ಲಿ ಪ್ರತಿ ತಂಡದಲ್ಲಿ 50 ವಿದ್ಯಾರ್ಥಿಗಳು 2 ಶಿಕ್ಷಕರು +ಬಿ.ಆರ್.ಪಿ/ ಸಿ.ಆರ್.ಪಿ + ಗೈಡ್+ಕಾವಲುಗಾರ + ಡ್ರೈವರ್ = ಒಟ್ಟು 56 ಜನರನ್ನು ಕರೆದೊಯ್ಯಲು ತಗಲುವ ವೆಚ್ಚವನ್ನು ಈ ಕೆಳಕಂಡಂತೆ ನೀಡಲಾಗಿದೆ.

| ಕ್ರಂ. ಸಂ. | ವಿವರ | 50+6 ವಿದ್ಯಾರ್ಥಿಗಳಿಗೆ ತಗುಲುವ ವೆಚ್ಚ (ರೂ.ಗಳಲ್ಲಿ) | ಒಬ್ಬರಿಗೆ ತಗುಲುವ ವೆಚ್ಚ (ರೂ.ಗಳಲ್ಲಿ) |
|---|---|---|---|
| 1 | ಸಾರಿಗೆ<br>1. 56 ಸೀಟ್ ಕೆ.ಎಸ್.ಆರ್.ಟಿ.ಸಿ. ಬಸ್ಸಿನ ಬಾಡಿಗೆ ವೆಚ್ಚ+ ಡ್ರೈವರ್ ಬಾಟಾ | 48000 | 960 |
| | 2. ವಿಮಾ ಕಂತು (56 ಮಂದಿಗೆ ರೂ.60/- ವಿಮಾ ಕಂತು) | 3360 | 68 |
| 2 | ವಸತಿ<br>ಡಾರ್ಮಿಟರಿ/ರೂಮ್<br>(ಪ್ರತಿ ಮಕ್ಕಳಿಗೆ ರೂ.150 ರಂತೆ 4 ದಿನಗಳಿಗೆ 50+5) | 33000 | 660 |
| 3 | ಊಟ<br>ಉಪಹಾರ-ಭೋಜನ-ಸಂಜೆ ಟೀ/ಕಾಫಿ-ರಾತ್ರಿ ಭೋಜನ<br>(ಪ್ರತಿ ಮಕ್ಕಳಿಗೆ ರೂ.150 ರಂತೆ 4 ದಿನಗಳಿಗೆ 50+6) | 33600 | 672 |
| 4 | ಪ್ರಯಾಣ ಭತ್ಯೆ ಮತ್ತು ಡುಟ್ಟಿ ಭತ್ಯೆ<br>1. ಗೈಡ್‌ಗೆ ಪ್ರತಿ ಪ್ರವಾಸಕ್ಕೆ ರೂ.2,000/-<br>2. ಗ್ರೂಪ್-ಡಿ. ಸಹಾಯಕರು ಪ್ರತಿ ಪ್ರವಾಸಕ್ಕೆ ರೂ.2,000/- | 4000 | 80 |
| 5 | ಶಿಕ್ಷಕರ ಗೌರವಧನ -2 ಶಿಕ್ಷಕರು<br>ಒಬ್ಬರು ಶಿಕ್ಷಕರಿಗೆ ಪ್ರತಿ ಪ್ರವಾಸಕ್ಕೆ ರೂ.3000/-ರಂತೆ ಅವರು ಮುಖ್ಯ ಶಿಕ್ಷಕರಾಗಿದ್ದಲ್ಲಿ ರೂ.3,500/- ಭತ್ಯೆ ನಿಗದಿಪಡಿಸಿದೆ. | 6000 | 120 |
| 6 | ವಾಹನ ನಿಲುಗಡೆ/ಟೋಲ್ ಫೀ/ಫ್ಲೆಕ್ಸ್ ಬ್ಯಾನರ್ಸ್/ದೂರವಾಣಿ ವೆಚ್ಚ | 2500 | 50 |
| 7 | ಪ್ರವೇಶ ಶುಲ್ಕ | 1500 | 30 |

| | | | | |
|---|---|---|---|---|
| 8 | ಲೇಖನ ಸಾಮಾಗ್ರಿ : (2 ಪುಸ್ತಕ-ಪೆನ್ಸಿಲ್-ಕಲರ್ ಪೆನ್ಸಿಲ್-ಟೋಪ್ಪಿ) (ರೂ.200 ರಂತೆ 50 ಮಕ್ಕಳಿಗೆ) | | 10000 | 200 |
| 9 | ಪ್ರವಾಸದಲ್ಲಿ ಸ್ಪರ್ಧಾತ್ಮಕ ಕಾರ್ಯಕ್ರಮಗಳಾದ ರಸಪ್ರಶ್ನೆ-ಚಿತ್ರಕಲೆ-ಪ್ರಬಂಧ-ಚರ್ಚಾ ಸ್ಪರ್ಧೆ ಗಳಲ್ಲಿ ವಿಜೇತರಿಗೆ ಬಹುಮಾನ ವಿತರಣೆ | | 4500 | 90 |
| 10 | ಸಮವಸ್ತ್ರ (ಟೀ-ಶರ್ಟ್) + ಟೂರ್ ಕಿಟ್ ಬ್ಯಾಗ್ (ಪ್ರತಿ ವಿದ್ಯಾರ್ಥಿಗೆ ರೂ.540 ರಂತೆ 50 ವಿದ್ಯಾರ್ಥಿಗಳಿಗೆ) (ಬ್ಯಾಗ್‌ನಲ್ಲಿ ವಿದ್ಯಾರ್ಥಿ ಐ.ಡಿ.ಕಾರ್ಡ್+ಶಿಕ್ಷಕರ ದೂರವಾಣಿ ಸಂಖ್ಯೆ_ಬಸ್ ನಂಬರ್+ಲೇಖನ ಸಾಮಾಗ್ರಿಗಳು ಇರಬೇಕು ಈ ಬ್ಯಾಗ್ ಮೇಲೆ ಪ್ರವಾಸೋದ್ಯಮ ಇಲಾಖೆಯ ಲೋಗೋ ಹಾಕಬೇಕು). | | 27000 | 540 |
| 11 | ಇತರೆ | | 1540 | 30 |
| | ಒಟ್ಟು | | 175000 | 3500 |

ಮೇಲ್ಕಂಡಂತೆ 56 ಜನರನ್ನೊಳಗೊಂಡು ಪ್ರತಿ ಜಿಲ್ಲೆಯಲ್ಲೂ ನಿಗದಿಪಡಿದಿರುವ ಗುರಿಗೆ ಅನುಸಾರವಾಗಿ 56 ಜನರ ತಂಡದಂತೆ ಪ್ರವಾಸ ಮಾಡಿಸುವುದು. ಪ್ರವಾಸದ ವೇಳೆ ಮಕ್ಕಳನ್ನು ಉತ್ತೇಜಿಸಲು ರಸಪ್ರಶ್ನೆ/ಪ್ರಬಂಧ/ಚಿತ್ರಕಲೆ/ಚರ್ಚಾ ಸ್ಪರ್ಧೆ ಗಳಲ್ಲಿ ಯಾವುದಾದರು 2 ಸ್ಪರ್ಧೆಗಳನ್ನು ಕಡ್ಡಾಯವಾಗಿ ನಡೆಸುವುದು. ಈ ಸ್ಪರ್ಧೆಗಳಲ್ಲಿ ವಿಜೇತರಾದ ಮೊದಲ ಮೂರು ವಿಜೇತರಿಗೆ ಮೊದಲನೇ ಬಹುಮಾನವಾಗಿ ರೂ.1,000/-ಬೆಲೆಯ ಪುಸ್ತಕ, ಎರಡನೇ ಬಹುಮಾನ ರೂ.750/-ಬೆಲೆಯ ಪುಸ್ತಕ, ಮೂರನೇ ನಗದು ಬಹುಮಾನ ರೂ.500/-ಬೆಲೆಯ ಪುಸ್ತಕಗಳನ್ನು ನೀಡುವುದು. ಪ್ರವಾಸ ಮುಗಿದ ನಂತರ ವಿಜೇತರಾದ ಮಕ್ಕಳನ್ನು ಆಯಾ ಜಿಲ್ಲೆಯ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಸಮ್ಮುಖದಲ್ಲಿ ಬಹುಮಾನಗಳನ್ನು ವಿತರಿಸುವುದು.

ಮಕ್ಕಳಿಗೆ ವಿತರಿಸುವ ಟೂರ್ ಕಿಟ್ ಬ್ಯಾಗ್‌ನ ಮೇಲೆ "ಕರ್ನಾಟಕ ಒಂದು ರಾಜ್ಯ ಹಲವು ಜಗತ್ತುಗಳು" ಎಂಬ ಇಲಾಖೆಯ ಲೋಗೋವನ್ನು ಮುದ್ರಿಸಬೇಕು. ಈ ಬ್ಯಾಗ್‌ನಲ್ಲಿ ಕರ್ನಾಟಕ ಪ್ರವಾಸೋದ್ಯಮ ಪ್ರವಾಸಿ ತಾಣಗಳ, ಕಲೆ ಸಂಸ್ಕೃತಿಯ ಬಗ್ಗೆ ಮಾಹಿತಿ, ಕರ್ನಾಟಕದ ಭೂಪಟ, ಫಜಲ್ಸ್, ಕ್ರಾಸ್‌ವರ್ಡ್, ಪೆನ್ಸಿಲ್, ಪೆನ್, ಟೋಪ್ಪಿ, ಟೀಶರ್ಟ್ ಇತ್ಯಾದಿ ಸಾಮಾಗ್ರಿಗಳನ್ನು ಸೇರಿಸಿ ಮಕ್ಕಳಿಗೆ ವಿತರಿಸಬೇಕು.

**ಕರ್ನಾಟಕ ದರ್ಶನವನ್ನು ಸೋಮವಾರದಿಂದ ಶುಕ್ರವಾರದವರೆಗೆ 4 ಹಗಲು 5 ರಾತ್ರಿ ದಿನಗಳಿಗೆ ಆಯೋಜಿಸುವುದು:**

1. ಅನುಷ್ಠಾನಕ್ಕೆ ಸಂಬಂಧಿಸಿದ ಅಂಶಗಳು:

- ಜಿಲ್ಲಾ ಹಂತದಲ್ಲಿ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕರ್ನಾಟಕ ದರ್ಶನ ಸಮನ್ವಯ ಸಮಿತಿಯನ್ನು ರಚಿಸುವುದು: ಸಮಿತಿ ಸದಸ್ಯರು ಈ ಕೆಳಗಿನಂತಿರುವುದು.

1. ಮುಖ್ಯ ಯೋಜನಾ ಅಧಿಕಾರಿ,(ಸಿ.ಪಿ.ಒ)- ಸದಸ್ಯರು

.....4

2. ಡಯಟ್ ಪ್ರಾಂಶುಪಾಲರು
3. ಜಿಲ್ಲಾ ಉಪಯೋಜನಾ ಸಮನ್ವಯ ಅಧಿಕಾರಿ,
4. ಸ.ಶಿ.ಅ. ಡಯಟ್‌ನ ಸಿ.ಎಂ.ಡಿ.ಇ. ವಿಭಾಗದ ಮುಖ್ಯಸ್ಥರು,
5. ಆಯಾ ಜಿಲ್ಲೆಯ ಎಲ್ಲಾ ಶೈಕ್ಷಣಿಕ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳು,
6. ಎಲ್ಲಾ ತಾಲ್ಲೂಕಿನ ತಹಸೀಲ್ದಾರರು,
7. ಕೆ.ಎಸ್.ಆರ್.ಟಿ.ಸಿ. ಪ್ರತಿನಿಧಿ,
8. ಆರ್.ಟಿ.ಓ. ಪ್ರತಿನಿಧಿ.
9. ಪ್ರಾಚ್ಯವಸ್ತು ಇಲಾಖೆಯ ಅಧಿಕಾರಿಗಳು,
10. ಪ್ರತಿ ತಾಲ್ಲೂಕಿನಿಂದ ಒಂದು ಸ್ವಯಂ ಸೇವಾ ಸಂಘದ ಪ್ರತಿನಿಧಿ,
11. ಜಿಲ್ಲಾ ಪ್ರವಾಸೋದ್ಯಮ ಇಲಾಖೆಯ ಉಪ ನಿರ್ದೇಶಕರು/ಸಹಾಯಕ ನಿರ್ದೇಶಕರು,
12. ಜಿಲ್ಲಾ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ – ಸದಸ್ಯ ಕಾರ್ಯದರ್ಶಿಗಳು.
13. ಜಿಲ್ಲಾ ಸಾಮಾಜಿಕ ಅಧಿಕಾರಿ (ಡಿ.ಎಸ್.ಡಬ್ಲ್ಯೂ) ಮತ್ತು ಬಿಸಿಎಂ ಅಧಿಕಾರಿ.

- ಜಿಲ್ಲೆಯ ಎಲ್ಲಾ ವಲಯಗಳ ಕರ್ನಾಟಕ ದರ್ಶನಕ್ಕೆ ಸಂಬಂಧಿಸಿದಂತೆ ತಾಲ್ಲೂಕುವಾರು ಕ್ರಿಯಾ ಯೋಜನೆಯನ್ನು ಹಾಗೂ ಮಕ್ಕಳ ಆಯ್ಕೆ ಪಟ್ಟಿಯನ್ನು ಮೇಲ್ಕಂಡ ಸಮಿತಿಯಲ್ಲಿ ಅನುಮೋದಿಸುವುದು ಹಾಗೂ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸಮನ್ವಯ ಕಾರ್ಯ ನಿರ್ವಹಿಸುವುದು.
- ಕರ್ನಾಟಕ ದರ್ಶನ ಪ್ರವಾಸ ಕಾರ್ಯಕ್ರಮವನ್ನು ಕೆಳಗಿನಂತೆ ಆದ್ಯತೆಯ ಮೇರಗೆ ಆಯೋಜಿಸುವುದು ಕಡ್ಡಾಯವಾಗಿರುತ್ತದೆ.

1. ಹಿಂದುಳಿದ, ಅಲ್ಪಸಂಖ್ಯಾತ ಹಾಗೂ ಇತರೆ ವರ್ಗದ ಮಕ್ಕಳಿಗೆ ಕರ್ನಾಟಕ ದರ್ಶನ ಪ್ರವಾಸ ಕಾರ್ಯಕ್ರಮ ಏರ್ಪಡಿಸಲು ಈಗಾಗಲೇ ಪ್ರತ್ಯೇಕವಾಗಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. ಹೀಗಾಗಿ ಹಿಂದುಳಿದ, ಅಲ್ಪಸಂಖ್ಯಾತ ಹಾಗೂ ಇತರೆ ವರ್ಗ ಮತ್ತು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಎರಡೂ ವರ್ಗದ ವಿದ್ಯಾರ್ಥಿಗಳನ್ನು ಒಟ್ಟಿಗೆ ಸೇರಿಸಿಕೊಂಡು ಕರ್ನಾಟಕ ದರ್ಶನ ಪ್ರವಾಸ ಕಾರ್ಯಕ್ರಮ ಹಮ್ಮಿಕೊಳ್ಳಲಾಗುವುದು.
2. ಕರ್ನಾಟಕ ದರ್ಶನ ಪ್ರವಾಸ ಕಾರ್ಯಕ್ರಮ ಏರ್ಪಡಿಸುವ ಸಂದರ್ಭದಲ್ಲಿ ಬಸ್ಸುಗಳ ಮೇಲೆ ಕರ್ನಾಟಕ ಪ್ರವಾಸೋದ್ಯಮದ ಹೆಸರು ಹಾಗೂ ಲೋಗೋವನ್ನು ಬಸ್ಸಿನ ಮುಂಭಾಗ ಹಾಗೂ ಹಿಂಭಾಗದಲ್ಲಿ ಎದ್ದು ಕಾಣಿಸುವ ರೀತಿಯಲ್ಲಿ ಬ್ಯಾನರ್‌ಗಳನ್ನು ಸಿದ್ಧಪಡಿಸಿ ಹಾಕುವುದು ಕಡ್ಡಾಯವಾಗಿರುತ್ತದೆ.

....5

<u>ಕಲಬುರಗಿ ವಿಭಾಗದ ಮಕ್ಕಳು:</u>

ಕಲಬುರಗಿ ವಿಭಾಗದ ಮಕ್ಕಳನ್ನು ಹಾಸನ, ಮೈಸೂರು, ಮಂಡ್ಯ, ಕೊಡಗು, ಉಡುಪಿ, ಚಾಮರಾಜನಗರ, ಚಿಕ್ಕಮಗಳೂರು ಹಾಗೂ ಬೆಂಗಳೂರು ಜಿಲ್ಲೆಯಲ್ಲಿರುವ ಪ್ರವಾಸಿ ತಾಣಗಳಿಗೆ ಆಧ್ಯತೆಯ ಮೇರೆಗೆ ಪ್ರವಾಸ ಹಮ್ಮಿಕೊಳ್ಳುವುದು ಖಡ್ಡಾಯವಾಗಿರುತ್ತದೆ.

<u>ಬೆಳಗಾವಿ ವಿಭಾಗದ ಮಕ್ಕಳು:</u>

ಈ ವಿಭಾಗದ ಮಕ್ಕಳನ್ನು ಚಿತ್ರದುರ್ಗ, ಬೆಂಗಳೂರು, ಚಿಕ್ಕಬಳ್ಳಾಪುರ, ಹಾಸನ, ಚಾಮರಾಜನಗರ, ಮೈಸೂರು, ಕೊಡಗು, ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಯಲ್ಲಿರುವ ಪ್ರವಾಸಿ ತಾಣಗಳಿಗೆ ಆಧ್ಯತೆಯ ಮೇರೆಗೆ ಪ್ರವಾಸ ಹಮ್ಮಿಕೊಳ್ಳುವುದು ಖಡ್ಡಾಯವಾಗಿರುತ್ತದೆ.

<u>ಬೆಂಗಳೂರು ವಿಭಾಗದ ಮಕ್ಕಳು:</u>

ಈ ವಿಭಾಗದ ಮಕ್ಕಳನ್ನು ಬಳ್ಳಾರಿ, ಬಿಜಾಪುರ, ಬಾಗಲಕೋಟೆ, ಬೀದರ್, ದಕ್ಷಿಣ ಕನ್ನಡ, ಉತ್ತರ ಕನ್ನಡ, ಉಡುಪಿ ಹಾಗೂ ಶಿವಮೊಗ್ಗ ಜಿಲ್ಲೆಯಲ್ಲಿರುವ ಪ್ರವಾಸಿ ತಾಣಗಳಿಗೆ ಆಧ್ಯತೆಯ ಮೇರೆಗೆ ಪ್ರವಾಸ ಹಮ್ಮಿಕೊಳ್ಳುವುದು ಖಡ್ಡಾಯವಾಗಿರುತ್ತದೆ.

<u>ಮೈಸೂರು ವಿಭಾಗದ ಮಕ್ಕಳು:</u>

ಈ ವಿಭಾಗದ ಮಕ್ಕಳನ್ನು ದಕ್ಷಿಣ ಕನ್ನಡ, ಉಡುಪಿ, ಉತ್ತರ ಕನ್ನಡ, ಬಳ್ಳಾರಿ, ಬಾಗಲಕೋಟೆ, ಬಿಜಾಪುರ, ಕಲಬುರಗಿ ಹಾಗೂ ಬೀದರ್ ಜಿಲ್ಲೆಯಲ್ಲಿರುವ ಪ್ರವಾಸಿ ತಾಣಗಳಿಗೆ ಆಧ್ಯತೆಯ ಮೇರೆಗೆ ಪ್ರವಾಸ ಹಮ್ಮಿಕೊಳ್ಳುವುದು ಖಡ್ಡಾಯವಾಗಿರುತ್ತದೆ.

- ಪ್ರವಾಸದ ಸಮಯದಲ್ಲಿ ಮಕ್ಕಳಿಗೆ ಬಿಸಿ ಊಟವನ್ನು ಒದಗಿಸುವಂತೆ ಸೂಚಿಸಲಾಗಿದೆ. ಶಾಲೆಯನ್ನು ಬಿಡುವಾಗ ಬಕೆಟ್‌ಗಳಲ್ಲಿ ಆಹಾರ ಕೊಂಡೊಯ್ಯುವುದನ್ನು ನಿಷೇಧಿಸಲಾಗಿದೆ.
- ಮಕ್ಕಳನ್ನು ಕೆರೆಗಳಿಗೆ ಸ್ನಾನಕ್ಕೆ ಕೊಂಡ್ಯೊಯ್ಯುವುದನ್ನು ಹಾಗೂ ಬಯಲು ಶೌಚಾಲಯಕ್ಕೆ ಕೊಂಡೊಯ್ಯುವುದನ್ನು ಖಡ್ಡಾಯವಾಗಿ ನಿಷೇಧಿಸಲಾಗಿದೆ. ಇಂತಹ ಪ್ರಕರಣಗಳು ಇಲಾಖೆಯ ಗಮನಕ್ಕೆ ಬಂದರೆ ಶಿಸ್ತು ಕ್ರಮ ಜರುಗಿಸಲಾಗುವುದು.
- ಮಕ್ಕಳಿಗೆ ಶಾಲಾ-ಕಾಲೇಜುಗಳಲ್ಲಿ ವಸತಿಯನ್ನು ಕಲ್ಪಿಸುವುದನ್ನು ನಿಷೇಧಿಸಲಾಗಿದೆ.
- ಇಲಾಖೆಯು ರಾಜ್ಯದ ವಿವಿಧ ಸ್ಥಳಗಳಲ್ಲಿ ನಿರ್ಮಿಸಿರುವ ಯಾತ್ರಿ ನಿವಾಸಗಳ ಪಟ್ಟಿಯನ್ನು ಸಹಾಯಕ ನಿರ್ದೇಶಕರು/ಉಪ ನಿರ್ದೇಶಕರಿಂದ ಪಡೆದು ಅಂತಹ ವಸತಿ ಸೌಲಭ್ಯಗಳಲ್ಲಿಯೇ ಆಧ್ಯತೆಯ ಮೇರೆಗೆ ವಸತಿ ಕಲ್ಪಿಸುವುದು.

- ಕೆ.ಎಸ್.ಟಿ.ಡಿ.ಸಿ. ನಡೆಸುತ್ತಿರುವ ಹೋಟೆಲ್‌ಗಳಲ್ಲಿ/ಯಾತ್ರಿನಿವಾಸ ಆಧ್ಯತೆ ಮೇರೆಗೆ ಮಕ್ಕಳಿಗೆ ವಸತಿಯ ವ್ಯವಸ್ಥೆಯನ್ನು ಕಲ್ಪಿಸುವುದು ಕಡ್ಡಾಯವಾಗಿದೆ. ಕೆ.ಎಸ್.ಟಿ.ಡಿ.ಸಿ ಸೌಲಭ್ಯಗಳಲ್ಲಿ ಇಲ್ಲದೇ ಇರುವ ಕಡೆ ಖಾಸಗಿ ಹೋಟೇಲ್‌ಗಳಲ್ಲಿ ಉತ್ತಮ ಊಟ/ವಸತಿ ವ್ಯವಸ್ಥೆ ಕಲ್ಪಿಸುವುದು.

- ಕರ್ನಾಟಕ ದರ್ಶನವನ್ನು ಪೂರ್ಣಗೊಳಿಸಿ ಖರ್ಚು-ವೆಚ್ಚಕ್ಕೆ ಸಂಬಂಧಿಸಿದಂತೆ ಹಣ ಉಪಯೋಗಿತ ಪತ್ರ, ಪ್ರವಾಸದ ಛಾಯಾಚಿತ್ರಗಳು, ಪ್ರವಾಸದ ಬಗ್ಗೆ ಮಕ್ಕಳಿಂದ ಅನಿಸಿಕೆ ಪತ್ರ ವನ್ನು (ಫೀಡ್‌ಬ್ಯಾಕ್ ಫಾರಂ) ಭರ್ತಿಮಾಡಿ ಪಡೆಯುವುದು ಹಾಗೂ ಪ್ರವಾಸದ ಬಗ್ಗೆ ಪ್ರವಾಸೋದ್ಯಮ ಇಲಾಖೆಗೆ ವಿವರವಾದ ವರದಿ ಸಲ್ಲಿಸುವುದು.

**ವಿದ್ಯಾರ್ಥಿಗಳು ಹಾಗೂ ಮೇಲ್ವಿಚಾರಕರ ಆಯ್ಕೆಗೆ ಮಾನದಂಡಗಳು :-**

**ಮಕ್ಕಳ ಆಯ್ಕೆ:**

- ಸರ್ಕಾರಿ ಶಾಲೆಗಳ ಮತ್ತು ಸರ್ಕಾರಿ ವಸತಿ ಶಾಲೆಗಳಲ್ಲಿ ಕಲಿಯುತ್ತಿರುವ 8, 9 ಮತ್ತು 10ನೇ ತರಗತಿಯ ಮಕ್ಕಳನ್ನು ಸದರಿ ಕಾರ್ಯಕ್ರಮಕ್ಕೆ ಆಯ್ಕೆ ಮಾಡುವುದು. ಇದರಲ್ಲಿ ಹೆಣ್ಣು ಮಕ್ಕಳನ್ನು ಪ್ರತ್ಯೇಕ ಬಸ್ಸಿನಲ್ಲಿ ಕರೆದೊಯ್ಯಬೇಕು. ಕೆಲವು ಜಿಲ್ಲೆಗಳಲ್ಲಿ ಭೌತಿಕ ಗುರಿ ಕಡಿಮೆ ಇದ್ದು ಇಂತಂಹ ಜಿಲ್ಲೆಗಳಲ್ಲಿ ಹೆಣ್ಣು ಮಕ್ಕಳು ಸಾಕಷ್ಟು ಸಂಖ್ಯೆಯಲ್ಲಿ ಲಭ್ಯವಿಲ್ಲದ ಪಕ್ಷದಲ್ಲಿ ಸಂಯುಕ್ತವಾಗಿ ಪ್ರವಾಸ ಏರ್ಪಡಿಸುವುದು.
- ಆರೋಗ್ಯಕರವಾಗಿರುವ ಮಕ್ಕಳನ್ನು ಆಯ್ಕೆ ಮಾಡುವುದು.
- ತಂದೆ ತಾಯಿಗಳಿಂದ ಒಪ್ಪಿಗೆ ಪತ್ರ ಪಡೆಯುವುದು.
- ಕರ್ನಾಟಕ ದರ್ಶನಕ್ಕೆ ವಲಯವಾರು ಶಾಲೆಗಳನ್ನು ಆಯ್ಕೆ ಮಾಡುವಲ್ಲಿ ಪ್ರತಿ ತಾಲ್ಲೂಕಿನಿಂದ ಹಿರಿಯ ಪ್ರಾಥಮಿಕ ಶಾಲೆಗಳ 8, 9 ಮತ್ತು 10ನೇ ತರಗತಿಯ ಮಕ್ಕಳನ್ನು ಆಯ್ಕೆ ಮಾಡುವುದು.
- ಯಾವುದೇ ಸಾಂಕ್ರಾಮಿಕ ಕಾಯಿಲೆಗಳಿಂದ ಹಾಗೂ ದೀರ್ಘಕಾಲಿಕ ಕಾಯಿಲೆಗಳಿಂದ ನರಳುತ್ತಿರುವವರನ್ನು ಕರೆತರಬಾರದು.
- ನದಿ ಮೂಲ, ನದಿ ದಂಡೆಗಳು ಮತ್ತು ಈಜು ಆಡುವಂತಹ ಕ್ರಿಯೆಗಳಲ್ಲಿ ಮಕ್ಕಳನ್ನು ನಿಷೇಧಿಸುವುದು.
- ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಕ್ಕಳ ಜಿಲ್ಲಾ ಗುರಿಗೆ ಅನುಗುಣವಾಗಿ ಪ್ರತೀ ತಾಲ್ಲೂಕಿನ ಮಕ್ಕಳಿಗೆ ಸಮಾನ ಅವಕಾಶ ಲಭಿಸುವಂತೆ ಕ್ರಮ ವಹಿಸುವುದು. (ಅನುಬಂಧ-1ನ್ನು ನೋಡುವುದು)

**ಶಿಕ್ಷಕರನ್ನು ಆಯ್ಕೆ ಮಾಡಲು ನಿಗಧಿಪಡಿಸಿರುವ ಮಾನದಂಡಗಳು :-**

- ತಂಡದಲ್ಲಿ ಕಡ್ಡಾಯವಾಗಿ ಇಬ್ಬರು ಪುರುಷ ಶಿಕ್ಷಕರು ಹಾಗೂ ಇಬ್ಬರು ಮಹಿಳಾ ಶಿಕ್ಷಕರು ಹೆಣ್ಣು ಮಕ್ಕಳ ತಂಡದಲ್ಲಿರಬೇಕು ಹಾಗೂ ಇವರನ್ನು ಆಯಾ ಜಿಲ್ಲೆಯ ಉಪ ನಿರ್ದೇಶಕರು (ಆಡಳಿತ), ಶಿಕ್ಷಣ ಇಲಾಖೆ ರವರು ಆಯ್ಕೆ ಮಾಡಬೇಕು.
- ಈ ಪೈಕಿ ಒಬ್ಬರು ಸ್ಕೌಟ್ಸ್ & ಗೈಡ್ಸ್ ತರಬೇತಿ ಹೊಂದಿದ ಶಿಕ್ಷಕರಾಗಿರಬೇಕು.
- ಒಬ್ಬರು ಕಲಾ ಶಿಕ್ಷಕರಾಗಿರಬೇಕು.
- ಪ್ರಥಮ ಚಿಕಿತ್ಸೆ ಜ್ಞಾನವನ್ನು ಹೊಂದಿರಬೇಕು.
- ಆರೋಗ್ಯವಂತೆ ಕ್ರಿಯಾಶೀಲ ಉತ್ಸಾಹಿ ಶಿಕ್ಷಕರಾಗಿರಬೇಕು.
- 50 ವರ್ಷಕ್ಕಿಂತ ಕಡಿಮೆ ವಯೋಮಾನದವರಾಗಿರಬೇಕು.
- ಪ್ರವಾಸ ಹೋಗುವ ಸ್ಥಳದ ಪರಿಚಯವನ್ನು ಮನಗಂಡಿರಬೇಕು.
- ಪ್ರತಿ ತಂಡಕ್ಕೂ ಬೇರೆ ಬೇರೆ ಶಿಕ್ಷಕರನ್ನು ಆಯ್ಕೆ ಮಾಡಬೇಕು.

**ಕರ್ನಾಟಕ ದರ್ಶನ ವೇಳಾಪಟ್ಟಿ :-**

1. ಕರ್ನಾಟಕ ದರ್ಶನ ಪ್ರವಾಸವನ್ನು ಡಿಸೆಂಬರ್-2016 ರೊಳಗೆ ಪೂರ್ಣಗೊಳಿಸುವುದು.
2. ಎಲ್ಲಾ ಮಕ್ಕಳಿಗೆ ಮುಂಚಿತವಾಗಿ ಪ್ರವಾಸ ವೇಳಾಪಟ್ಟಿ ಪ್ರವಾಸಿ ತಾಣಗಳ ರೂಟ್ ಮ್ಯಾಪ್ ಮತ್ತು ವಿವರಗಳನ್ನು ನೀಡುವುದು.
3. ಇಡೀ ಪ್ರವಾಸದ ಕಾರ್ಯಕ್ರಮದಲ್ಲಿ ರಾತ್ರಿ ವೇಳೆ ತಂಗುವ ವ್ಯವಸ್ಥೆಯನ್ನು ಮುಂಚಿತವಾಗಿಯೇ ಉಪ ನಿರ್ದೇಶಕರು/ಸಹಾಯಕ ನಿರ್ದೇಶಕರು ರವರ ನೇತೃತ್ವದಲ್ಲಿ ವ್ಯವಸ್ಥೆ ಮಾಡುವುದು.
4. ಎಲ್ಲಾ ಪೋಷಕರಿಗೂ ಪ್ರವಾಸಕ್ಕೆ ಹೋಗುವ ಶಿಕ್ಷಕರ ದೂರವಾಣಿ ಸಂಖ್ಯೆಯನ್ನು ಕಡ್ಡಾಯವಾಗಿ ನೀಡುವುದು.
5. ಪ್ರತಿ ಬಸ್ಸಿನಲ್ಲಿ ಪ್ರಾಥಮಿಕ ಚಿಕಿತ್ಸಾ ಕಿಟ್ ಮತ್ತು ಕೆಲ ಸಾಮಾನ್ಯ ಔಷಧಿಗಳನ್ನು ಕಡ್ಡಾಯವಾಗಿ ಕೊಂಡೊಯ್ಯತಕ್ಕದ್ದು.
6. ಜಿಲ್ಲಾ ಕಛೇರಿಯಿಂದ ಕ್ರೋಢೀಕರಣ ವರದಿ, ವೆಚ್ಚದ ವಿವರ, ಪ್ರವಾಸಕ್ಕೆ ಹೊರಟ ಮಕ್ಕಳ ವಿವರ (ವರ್ಗವಾರು ಕ್ರೋಢೀಕರಣ ನೀಡುವುದು) ಹಾಗೂ ದಾಖಲೀಕರಣದ ಪ್ರತಿ ಛಾಯಾಚಿತ್ರ ಸಮೇತ ಸಲ್ಲಿಸುವುದು.
7. ಪ್ರತಿ ಜಿಲ್ಲೆಯಲ್ಲೂ ಪ್ರತಿ ತಂಡದಲ್ಲಿ 50 ವಿದ್ಯಾರ್ಥಿಗಳಂತೆ ಪ್ರತ್ಯೇಕ ತಂಡಗಳಲ್ಲಿ ಪ್ರವಾಸವನ್ನು ಕೈಗೊಳ್ಳುವುದು.
8. ಪ್ರವಾಸ ಪೂರ್ಣಗೊಂಡ 30 ದಿನಗಳೊಳಗಾಗಿ ದಾಖಲಾತಿಗಳೊಂದಿಗೆ ಅನುಪಾಲನಾ ವರದಿಯನ್ನು ನಿರ್ದೇಶಕರ ಕಛೇರಿ, ಪ್ರವಾಸೋದ್ಯಮ ಇಲಾಖೆ, ಬೆಂಗಳೂರು ರವರಿಗೆ ನೀಡುವುದು.

(ಬಿ.ಎನ್ ಯತಿರಾಜ್)
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ

ಸರ್ಕಾರದ ಆದೇಶ ಸಂಖ್ಯೆ: ಪ್ರಇ 187 ಪ್ರವಾಯೋ 2016, ದಿನಾಂಕ:07-06-2016ಕ್ಕೆ

ಅನುಬಂಧ-2

## 2016-17ನೇ ಸಾಲಿನಲ್ಲಿ ಹಿಂದುಳಿದ, ಅಲ್ಪಸಂಖ್ಯಾತ ಹಾಗೂ ಇತರೆ ವರ್ಗ ಎಲ್ಲ ವಿದ್ಯಾರ್ಥಿಗಳಿಗೆ ಕರ್ನಾಟಕ ದರ್ಶನ ಪ್ರವಾಸ ಕೈಗೊಳ್ಳುವ ಸಂಬಂಧ ಹೊರಡಿಸಿರುವ ಮಾರ್ಗಸೂಚಿಗಳು

ಕರ್ನಾಟಕ ದರ್ಶನದ ಸಾಮಾನ್ಯ ಉದ್ದೇಶಗಳು :

- ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳು ಪರಿಪೂರ್ಣವಾಗಿ ರಾಜ್ಯದಲ್ಲಿರುವ ಮುಖ್ಯವಾದ ಪ್ರವಾಸಿ ಸ್ಥಳಗಳು ಅಂದರೆ ಸ್ಥಳೀಯ ವೈಜ್ಞಾನಿಕ, ಧಾರ್ಮಿಕ, ಭೌಗೋಳಿಕ, ನೈಸರ್ಗಿಕ, ಐತಿಹಾಸಿಕ, ವಿಜ್ಞಾನ ಮತ್ತು ಕೈಗಾರಿಕೆಗಳು, ಉತ್ತಮ ಶಾಲೆ, ಆಕಾಶವಾಣಿ ಕೇಂದ್ರ, ಗಣಿಗಳು, ಉದ್ಯಾನವನ, ಮ್ಯೂಸಿಯಂ, ಪ್ರಖ್ಯಾತ ವ್ಯಕ್ತಿಗಳು ಹುಟ್ಟಿದ ಊರು ಇತ್ಯಾದಿಯನ್ನು ಅರಿಯುವುದು.
- ಮಕ್ಕಳು ತಮ್ಮ ಶೈಕ್ಷಣಿಕ ಜೀವನವನ್ನು ರೂಪಿಸಿಕೊಳ್ಳಲು ಸಹಕಾರಿಯಾಗುವಂತೆ ಮಾರ್ಗದರ್ಶನವನ್ನು ನೀಡುವುದು.
- ಮಕ್ಕಳಲ್ಲಿ ಸಹಕಾರ, ಹೊಂದಾಣಿಕೆ, ನಾಯಕತ್ವ ಮನೋಭಾವವನ್ನು ಬೆಳೆಸುವುದು.
- ಕರ್ನಾಟಕ ಸಾಂಸ್ಕೃತಿಕ ಪರಂಪರೆಯ ಅರಿವು ಹಾಗೂ ಅಭಿವೃದ್ಧಿಗೊಳಿಸುವಲ್ಲಿ ಮಕ್ಕಳ ಭಾಗವಹಿಸುವಿಕೆಯನ್ನು ಪ್ರೋತ್ಸಾಹಿಸುವುದು.
- ಕರ್ನಾಟಕ ಸಾಮಾಜಿಕ ಸ್ಥಿತಿಗತಿಯ ಕುರಿತು ಅರಿವುಂಟು ಮಾಡುವುದು.
- ಮಕ್ಕಳಿಗೆ ನೈಜ ಪರಿಸರದ ದರ್ಶನ ಮಾಡಿಸುವುದು.
- ತರಗತಿ ಕಲಿಕೆಗೆ ಪೂರಕವಾದ ಮಾಹಿತಿ ಒದಗಿಸುವುದು.
- ಶಾಲಾ ಚಟುವಟಿಕೆಗಳನ್ನು, ಹೊರ ಪ್ರಪಂಚ ಹಾಗೂ ಸಮಾಜದೊಂದಿಗೆ ಸಮನ್ವಯಗೊಳಿಸುವುದು.
- ಕರ್ನಾಟಕ ಐತಿಹಾಸಿಕ ವಿಷಯಗಳ ನೈಜ ಸ್ಥಿತಿಯ ದರ್ಶನ ಮಾಡಿಸುವುದು.
- ಪ್ರಾದೇಶಿಕ ಮಟ್ಟದ ಜನಜೀವನ, ಭಾಷೆ, ಆಚಾರ ವಿಚಾರಗಳಲ್ಲಿನ ವೈವಿಧ್ಯತೆಯ ಅರಿವುಂಟು ಮಾಡುವುದು.

ನಿರ್ದಿಷ್ಟ ಉದ್ದೇಶಗಳು :

- ಮಕ್ಕಳು ಶಿಕ್ಷಣದಲ್ಲಿ ಆಸಕ್ತಿ ಬೆಳೆಸಿಕೊಂಡು ಪಠ್ಯೇತರ ಹಾಗೂ ಶೈಕ್ಷಣಿಕ ಚಟುವಟಿಕೆಗಳಲ್ಲಿ ಹೆಚ್ಚು ಉತ್ಸಾಹದಿಂದ ಭಾಗವಹಿಸುವುದು. ಮಕ್ಕಳು ಶಾಲೆಯತ್ತ ಹೆಚ್ಚು ಆಕರ್ಷಿತರಾಗಿ ಶಾಲೆ ಬಿಡುವ ಸಾಧ್ಯತೆಗಳು ಕಡಿಮೆಯಾಗುವುದು.
- ಆರ್ಥಿಕವಾಗಿ ಹಿಂದುಳಿದ ಮಕ್ಕಳು ಹಾಗೂ ಹೆಣ್ಣು ಮಕ್ಕಳು ರಾಜ್ಯದ ಅನೇಕ ಸ್ಥಳಗಳ ನೈಜ ಪರಿಸರ ದರ್ಶನ ಪಡೆಯಲು ಸಹಕಾರಿಯಾಗುವುದು.
- ಮಕ್ಕಳ ಕೀಳರಿಮೆ ಹೋಗಲಾಡಿಸುವುದು.
- ಮಕ್ಕಳಲ್ಲಿ ಸ್ಪರ್ಧಾತ್ಮಕ ಮನೋಭಾವ ಬೆಳೆಸುವುದು.
- ಮಕ್ಕಳಲ್ಲಿ ಪಠ್ಯವಸ್ತುವಿನ ಸಾಮರ್ಥ್ಯಗಳ ಬೆಳವಣಿಗೆಗೆ ಸಹಕಾರಿಯಾಗುವುದು.

- ವಿದ್ಯಾರ್ಥಿಗಳಲ್ಲಿ ವೀಕ್ಷಣೆ, ಮೌಖಿಕ ಹಾಗೂ ಲಿಖಿತ ಕೌಶಲ್ಯಗಳ ಸಂವರ್ಧನೆ ಮಾಡುವುದು.
- ನೋಡಿ ಕಲಿಯುವುದರಿಂದ ಅನೇಕ ಪರಿಕಲ್ಪನೆಗಳು ಸ್ಪಷ್ಟವಾಗುವುದು.
- ಮಕ್ಕಳ ಯೋಚನಾ ಶಕ್ತಿಯನ್ನು ವಿಶಾಲಗೊಳಿಸುವುದು.
- ರಾಜ್ಯದ ಸಂಸ್ಕೃತಿ, ಕಲೆ, ದೇಶಭಕ್ತಿ, ವೈಚಾರಿಕತೆ ಬಗ್ಗೆ ಅರಿವು ಮೂಡಿಸುವುದು.

ಮಕ್ಕಳಿಗೆ ಸರ್ವತೋಮುಖ ಬೆಳವಣಿಗೆಗೆ ಸಹಕಾರಿಯಾಗುತ್ತದೆ. ಮಕ್ಕಳ ದಾಖಲಾತಿ, ಹಾಜರಾತಿ ಉತ್ತಮವಾಗುತ್ತದೆ. ಒಟ್ಟಾರೆ ಗುಣಮಟ್ಟದ ಶಿಕ್ಷಣ ನೀಡುವ ದಿಸೆಯಲ್ಲಿ ಎಲ್ಲಾ ಮಕ್ಕಳಲ್ಲಿ ಉತ್ಸಾಹ ತುಂಬುವುದಾಗಿದೆ. ಯೋಜನೆಯ ಲಾಭವು ನೇರವಾಗಿ ಮಕ್ಕಳಿಗೆ ತಲುಪುವುದರಿಂದ ಔಚಿತ್ಯಪೂರ್ಣವಾಗಿದ್ದು, ಪೋಷಕರು ಹಾಗೂ ಸಮುದಾಯದ ಸಹಕಾರವನ್ನು ಸಹ ಗಳಿಸಬಹುದಾಗಿದೆ ಎಂದು ಅಭಿಪ್ರಾಯ ಪಟ್ಟು ಕರ್ನಾಟಕ ದರ್ಶನ ಪ್ರವಾಸ ಆಯೋಜಿಸಲು ಉದ್ದೇಶಿಸಲಾಗಿದೆ.

<u>ಘಟಕ ವೆಚ್ಚದ ವಿವರ:</u>

ಪ್ರತಿ ಜಿಲ್ಲೆಯಲ್ಲಿ ಪ್ರತಿ ತಂಡದಲ್ಲಿ 50 ವಿದ್ಯಾರ್ಥಿಗಳು 2 ಶಿಕ್ಷಕರು+ಗೈಡ್+ಗ್ರೂಪ್-ಡಿ+ಡ್ರೈವರ್+ಸಹಾಯಕರು = ಒಟ್ಟು 56 ಜನರನ್ನು ಕರೆದೊಯ್ಯಲು ತಗಲುವ ಅಂದಾಜು ವೆಚ್ಚವನ್ನು ಈ ಕೆಳಕಂಡಂತೆ ಲೆಕ್ಕಚಾರ ಮಾಡಲಾಗಿದೆ.

| ಕ್ರಂ. ಸಂ. | ವಿವರ | 50+6 ವಿದ್ಯಾರ್ಥಿಗಳಿಗೆ ತಗುಲುವ ವೆಚ್ಚ (ರೂ.ಗಳಲ್ಲಿ) | ಒಬ್ಬರಿಗೆ ತಗುಲುವ ವೆಚ್ಚ (ರೂ.ಗಳಲ್ಲಿ) |
|---|---|---|---|
| 1 | **ಸಾರಿಗೆ**<br>1. 56 ಸೀಟ್ ಕೆ.ಎಸ್.ಆರ್.ಟಿ.ಸಿ. ಬಸ್ಸಿನ ಬಾಡಿಗೆ ವೆಚ್ಚ + ಡ್ರೈವರ್ ಬಾಟಾ | 48000 | 960 |
| | 2. ವಿಮಾ ಕಂತು (56 ಮಂದಿಗೆ ರೂ.60/- ವಿಮಾ ಕಂತು) | 3360 | 68 |
| 2 | **ವಸತಿ:** ಡಾರ್ಮಿಟರಿ/ರೂಮ್<br>(ಪ್ರತಿ ಮಕ್ಕಳಿಗೆ ರೂ.150 ರಂತೆ 4 ದಿನಗಳಿಗೆ 50+5) | 33000 | 660 |
| 3 | **ಊಟ:** ಉಪಹಾರ-ಭೋಜನ-ಸಂಜೆ ಟೀ/ಕಾಫಿ-ರಾತ್ರಿ ಭೋಜನ<br>(ಪ್ರತಿ ಮಕ್ಕಳಿಗೆ ರೂ.150 ರಂತೆ 4 ದಿನಗಳಿಗೆ 50+6) | 33600 | 672 |
| 4 | ಪ್ರಯಾಣ ಭತ್ಯೆ ಮತ್ತು ಖುಟ್ಟ ಭತ್ಯೆ<br>1. ಗೈಡ್‌ಗೆ ಪ್ರತಿ ಪ್ರವಾಸಕ್ಕೆ ರೂ.2,000ಜ/-<br>2. ಗ್ರೂಪ್-ಡಿ, ಸಹಾಯಕರು ಪ್ರತಿ ಪ್ರವಾಸಕ್ಕೆ ರೂ.2,000/- | 4000 | 80 |

3/-

| | | | |
|---|---|---|---|
| 5 | ಶಿಕ್ಷಕರ ಗೌರವಧನ -2 ಶಿಕ್ಷಕರು<br>ಒಬ್ಬರು ಶಿಕ್ಷಕರಿಗೆ ಪ್ರತಿ ಪ್ರವಾಸಕ್ಕೆ ರೂ.3000/-ರಂತೆ ಅವರು ಮುಖ್ಯ ಶಿಕ್ಷಕರಾಗಿದ್ದಲ್ಲಿ ರೂ.3,500/- ಭತ್ಯೆ ನಿಗಧಿಪಡಿಸಿದೆ. | 6000 | 120 |
| 6 | ವಾಹನ ನಿಲುಗಡೆ/ಟೋಲ್ ಫ್ರೀ/ಫ್ಲೆಕ್ಸ್ ಬ್ಯಾನರ್ಸ್/ದೂರವಾಣಿ ವೆಚ್ಚ | 2500 | 50 |
| 7 | ಪ್ರವೇಶ ಶುಲ್ಕ | 1500 | 30 |
| 8 | **ಲೇಖನ ಸಾಮಾಗ್ರಿ** : (2 ಪುಸ್ತಕ-ಪೆನ್ಸಿಲ್-ಕಲರ್ ಪೆನ್ಸಿಲ್-ಟೋಪ್ಪಿ) (ರೂ.200 ರಂತೆ 50 ಮಕ್ಕಳಿಗೆ) | 10000 | 200 |
| 9 | ಪ್ರವಾಸದಲ್ಲಿ ಸ್ಪರ್ಧಾತ್ಮಕ ಕಾರ್ಯಕ್ರಮಗಳಾದ ರಸಪ್ರಶ್ನೆ-ಚಿತ್ರಕಲೆ-ಪ್ರಬಂಧ-ಚರ್ಚಾ ಸ್ಪರ್ಧೆಗಳಲ್ಲಿ ವಿಜೇತರಿಗೆ ಬಹುಮಾನ ವಿತರಣೆ | 4500 | 90 |
| 10 | ಸಮವಸ್ತ್ರ (ಟೀ-ಶರ್ಟ್) + ಟೂರ್ ಕಿಟ್ ಬ್ಯಾಗ್<br>(ಪ್ರತಿ ವಿದ್ಯಾರ್ಥಿಗೆ ರೂ.540 ರಂತೆ 50 ವಿದ್ಯಾರ್ಥಿಗಳಿಗೆ)<br>(ಬ್ಯಾಗ್‌ನಲ್ಲಿ ವಿದ್ಯಾರ್ಥಿ ಐ.ಡಿ.ಕಾರ್ಡ್+ಶಿಕ್ಷಕರ ದೂರವಾಣಿ ಸಂಖ್ಯೆ-ಬಸ್ ನಂಬರ್+ಲೇಖನ ಸಾಮಾಗ್ರಿಗಳು ಇರಬೇಕು ಈ ಬ್ಯಾಗ್ ಮೇಲೆ ಪ್ರವಾಸೋದ್ಯಮ ಇಲಾಖೆಯ ಲೋಗೋ ಹಾಕಬೇಕು). | 27000 | 540 |
| 11 | ಇತರೆ | 1540 | 30 |
| | ಒಟ್ಟು | 175000 | 3500 |

ಮೇಲ್ಕಂಡಂತೆ 56 ಜನರನ್ನೊಳಗೊಂಡು ಪ್ರತಿ ಜಿಲ್ಲೆಯಲ್ಲೂ ನಿಗಧಿಪಡಿಸಿರುವ ಗುರಿಗೆ ಅನುಸಾರವಾಗಿ 56 ಜನರ ತಂಡದಂತೆ ಪ್ರವಾಸ ಮಾಡಿಸುವುದು. ಪ್ರವಾಸದ ವೇಳೆ ಮಕ್ಕಳನ್ನು ಉತ್ತೇಜಿಸಲು ರಸಪ್ರಶ್ನೆ/ಪ್ರಬಂಧ/ಚಿತ್ರಕಲೆ/ಚರ್ಚಾ ಸ್ಪರ್ಧೆಗಳಲ್ಲಿ ಯಾವುದಾದರು 2 ಸ್ಪರ್ಧೆಗಳನ್ನು ಕಡ್ಡಾಯವಾಗಿ ನಡೆಸುವುದು. ಈ ಸ್ಪರ್ಧೆಗಳಲ್ಲಿ ವಿಜೇತರಾದ ಮೊದಲ ಮೂರು ವಿಜೇತರಿಗೆ ಮೊದಲನೇ ಬಹುಮಾನವಾಗಿ ರೂ.1,000/-ಬೆಲೆಯ ಪುಸ್ತಕ, ಎರಡನೇ ಬಹುಮಾನ ರೂ.750/-ಬೆಲೆಯ ಪುಸ್ತಕ, ಮೂರನೇ ನಗದು ಬಹುಮಾನ ರೂ.500/-ಬೆಲೆಯ ಪುಸ್ತಕಗಳನ್ನು ನೀಡುವುದು. ಪ್ರವಾಸ ಮುಗಿದ ನಂತರ ವಿಜೇತರಾದ ಮಕ್ಕಳನ್ನು ಆಯಾ ಜಿಲ್ಲೆಯ ಜಿಲ್ಲಾ ಪಂಚಾಯತ್ ಕಛೇರಿಗೆ ಕರೆಸಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ನೇತೃತ್ವದಲ್ಲಿ ಬಹುಮಾನಗಳನ್ನು ವಿತರಿಸುವುದು.

ಮಕ್ಕಳಿಗೆ ವಿತರಿಸುವ ಟೂರ್ ಕಿಟ್‌ಬ್ಯಾಗ್‌ನಲ್ಲಿ ಕರ್ನಾಟಕ ಪ್ರವಾಸೋದ್ಯಮದ ಪ್ರವಾಸಿ ತಾಣಗಳ, ಕಲೆ ಸಂಸ್ಕೃತಿಯ ಬಗ್ಗೆ ಮಾಹಿತಿ, ಕರ್ನಾಟಕದ ಭೂಪಟ, ಫಜಲ್ಸ್, ಕ್ರಾಸ್‌ವರ್ಡ್, ಪೆನ್ಸಿಲ್, ಪೆನ್, ಟೋಪ್ಪಿ, ಟೀಶರ್ಟ್ ಇತ್ಯಾದಿ ಸಾಮಾಗ್ರಿಗಳನ್ನು ಸೇರಿಸಿ ಮಕ್ಕಳಿಗೆ ವಿತರಿಸಬೇಕು.

ಕರ್ನಾಟಕ ದರ್ಶನವನ್ನು ಸೋಮವಾರದಿಂದ ಶುಕ್ರವಾರದವರೆಗೆ ೫ ಹಗಲು 4 ರಾತ್ರಿ ದಿನಗಳಿಗೆ ಆಯೋಜಿಸುವುದು.

1. ಅನುಷ್ಠಾನಕ್ಕೆ ಸಂಬಂಧಿಸಿದ ಅಂಶಗಳು:

- ಜಿಲ್ಲಾ ಹಂತದಲ್ಲಿ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕರ್ನಾಟಕ ದರ್ಶನ ಸಮನ್ವಯ ಸಮಿತಿಯನ್ನು ರಚಿಸುವುದು: ಸಮಿತಿ ಸದಸ್ಯರು ಈ ಕೆಳಗಿನಂತಿರುವುದು.

    1. ಮುಖ್ಯ ಯೋಜನಾ ಅಧಿಕಾರಿ,(ಸಿ.ಪಿ.ಒ)- ಸದಸ್ಯರು
    2. ಡಯಟ್ ಪ್ರಾಂಶುಪಾಲರು
    3. ಜಿಲ್ಲಾ ಉಪಯೋಜನಾ ಸಮನ್ವಯ ಅಧಿಕಾರಿ,
    4. ಸ.ಶಿ.ಅ. ಡಯಟ್‌ನ ಸಿ.ಎಂ.ಡಿ.ಇ. ವಿಭಾಗದ ಮುಖ್ಯಸ್ಥರು,
    5. ಆಯಾ ಜಿಲ್ಲೆಯ ಎಲ್ಲಾ ಶೈಕ್ಷಣಿಕ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳು,
    6. ಎಲ್ಲಾ ತಾಲ್ಲೂಕಿನ ತಹಸೀಲ್ದಾರರು,
    7. ಕೆ.ಎಸ್.ಆರ್.ಟಿ.ಸಿ. ಪ್ರತಿನಿಧಿ,
    8. ಆರ್.ಟಿ.ಓ. ಪ್ರತಿನಿಧಿ,
    9. ಪ್ರಾಚ್ಯವಸ್ತು ಇಲಾಖೆಯ ಅಧಿಕಾರಿಗಳು,
    10. ಪ್ರತಿ ತಾಲ್ಲೂಕಿನಿಂದ ಒಂದು ಸ್ವಯಂ ಸೇವಾ ಸಂಘದ ಪ್ರತಿನಿಧಿ,
    11. ಜಿಲ್ಲಾ ಪ್ರವಾಸೋದ್ಯಮ ಇಲಾಖೆಯ ಉಪ ನಿರ್ದೇಶಕರು/ಸಹಾಯಕ ನಿರ್ದೇಶಕರು,
    12. ಜಿಲ್ಲಾ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ – ಸದಸ್ಯ ಕಾರ್ಯದರ್ಶಿಗಳು.

- ಜಿಲ್ಲೆಯ ಎಲ್ಲಾ ವಲಯಗಳ ಕರ್ನಾಟಕ ದರ್ಶನಕ್ಕೆ ಸಂಬಂಧಿಸಿದಂತೆ ತಾಲ್ಲೂಕುವಾರು ಕ್ರಿಯಾ ಯೋಜನೆಯನ್ನು ಹಾಗೂ ಮಕ್ಕಳ ಆಯ್ಕೆ ಪಟ್ಟಿಯನ್ನು ಮೇಲ್ಕಂಡ ಸಮಿತಿಯಲ್ಲಿ ಅನುಮೋದಿಸುವುದು ಹಾಗೂ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸಮನ್ವಯ ಕಾರ್ಯ ನಿರ್ವಹಿಸುವುದು.

- ಪ್ರವಾಸವನ್ನು ಉತ್ತರ ಕರ್ನಾಟಕದ ಮಕ್ಕಳಿಗೆ ದಕ್ಷಿಣ ಕರ್ನಾಟಕದ ಪ್ರವಾಸಿ ತಾಣಗಳ ದರ್ಶನ ಮಾಡಿಸುವುದು ಹಾಗೆಯೇ ದಕ್ಷಿಣ ಕರ್ನಾಟಕದ ಮಕ್ಕಳಿಗೆ ಉತ್ತರ ಕರ್ನಾಟಕದ ಪ್ರವಾಸಿ ತಾಣಗಳ ದರ್ಶನ ಮಾಡಿಸುವುದು.

- <u>ಕರ್ನಾಟಕ ದರ್ಶನ ಪ್ರವಾಸ ಕಾರ್ಯಕ್ರಮವನ್ನು ಕೆಳಗಿನಂತೆ ಆದ್ಯತೆಯ ಮೇರಗೆ ಆಯೋಜಿಸುವುದು ಕಡ್ಡಾಯವಾಗಿರುತ್ತದೆ.</u>

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳನ್ನು ಹಾಗೂ ಹಿಂದುಳದ, ಅಲ್ಪಸಂಖ್ಯಾತ ಹಾಗೂ ಇತರೆ ವರ್ಗ ಎಲ್ಲ ವಿದ್ಯಾರ್ಥಿಗಳಗೆ ಒಟ್ಟಾಗಿ ಕರ್ನಾಟಕ ದರ್ಶನ ಪ್ರವಾಸ ಏರ್ಪಡಿಸುವುದು.

<u>ಕಲಬುರಗಿ ವಿಭಾಗದ ಮಕ್ಕಳು:</u>

ಕಲಬುರಗಿ ವಿಭಾಗದ ಮಕ್ಕಳನ್ನು ಹಾಸನ, ಮೈಸೂರು, ಮಂಡ್ಯ, ಕೊಡಗು, ಉಡುಪಿ, ಚಾಮರಾಜನಗರ, ಚಿಕ್ಕಮಗಳೂರು ಹಾಗೂ ಬೆಂಗಳೂರು ಜಿಲ್ಲೆಯಲ್ಲಿರುವ ಪ್ರವಾಸಿ ತಾಣಗಳಿಗೆ ಆಧ್ಯತೆಯ ಮೇರೆಗೆ ಪ್ರವಾಸ ಹಮ್ಮಿಕೊಳ್ಳುವುದು ಖಡ್ಡಾಯವಾಗಿರುತ್ತದೆ.

<u>ಬೆಳಗಾವಿ ವಿಭಾಗದ ಮಕ್ಕಳು:</u>

ಈ ವಿಭಾಗದ ಮಕ್ಕಳನ್ನು ಚಿತ್ರದುರ್ಗ, ಬೆಂಗಳೂರು, ಚಿಕ್ಕಬಳ್ಳಾಪುರ, ಹಾಸನ, ಚಾಮರಾಜನಗರ, ಮೈಸೂರು, ಕೊಡಗು, ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಯಲ್ಲಿರುವ ಪ್ರವಾಸಿ ತಾಣಗಳಿಗೆ ಆಧ್ಯತೆಯ ಮೇರೆಗೆ ಪ್ರವಾಸ ಹಮ್ಮಿಕೊಳ್ಳುವುದು ಖಡ್ಡಾಯವಾಗಿರುತ್ತದೆ.

<u>ಬೆಂಗಳೂರು ವಿಭಾಗದ ಮಕ್ಕಳು:</u>

ಈ ವಿಭಾಗದ ಮಕ್ಕಳನ್ನು ಬಳ್ಳಾರಿ, ಬಿಜಾಪುರ, ಬಾಗಲಕೋಟೆ, ಬೀದರ್, ದಕ್ಷಿಣ ಕನ್ನಡ, ಉತ್ತರ ಕನ್ನಡ, ಉಡುಪಿ ಹಾಗೂ ಶಿವಮೊಗ್ಗ ಜಿಲ್ಲೆಯಲ್ಲಿರುವ ಪ್ರವಾಸಿ ತಾಣಗಳಿಗೆ ಆಧ್ಯತೆಯ ಮೇರೆಗೆ ಪ್ರವಾಸ ಹಮ್ಮಿಕೊಳ್ಳುವುದು ಖಡ್ಡಾಯವಾಗಿರುತ್ತದೆ.

<u>ಮೈಸೂರು ವಿಭಾಗದ ಮಕ್ಕಳು:</u>

ಈ ವಿಭಾಗದ ಮಕ್ಕಳನ್ನು ದಕ್ಷಿಣ ಕನ್ನಡ, ಉಡುಪಿ, ಉತ್ತರ ಕನ್ನಡ, ಬಳ್ಳಾರಿ, ಬಾಗಲಕೋಟೆ, ಬಿಜಾಪುರ, ಕಲಬುರಗಿ ಹಾಗೂ ಬೀದರ್ ಜಿಲ್ಲೆಯಲ್ಲಿರುವ ಪ್ರವಾಸಿ ತಾಣಗಳಿಗೆ ಆಧ್ಯತೆಯ ಮೇರೆಗೆ ಪ್ರವಾಸ ಹಮ್ಮಿಕೊಳ್ಳುವುದು ಖಡ್ಡಾಯವಾಗಿರುತ್ತದೆ.

- ಪ್ರವಾಸದ ಸಮಯದಲ್ಲಿ ಮಕ್ಕಳಿಗೆ ಬಿಸಿ ಊಟವನ್ನೇ ಒದಗಿಸುವಂತೆ ಸೂಚಿಸಲಾಗಿದೆ. ಶಾಲೆಯನ್ನು ಬಿಡುವಾಗ ಬಕೆಟ್‌ಗಳಲ್ಲಿ ಆಹಾರ ಕೊಂಡೊಯ್ಯುವುದನ್ನು ನಿಷೇಧಿಸಲಾಗಿದೆ.
- ಮಕ್ಕಳನ್ನು ಕೆರೆಗಳಿಗೆ ಸ್ನಾನಕ್ಕೆ ಕೊಂಡ್ಯೊಯ್ಯುವುದನ್ನು ಹಾಗೂ ಬಯಲು ಶೌಚಾಲಯಕ್ಕೆ ಕೊಂಡೊಯ್ಯುವುದನ್ನು ಖಡ್ಡಾಯವಾಗಿ ನಿಷೇಧಿಸಲಾಗಿದೆ. ಇಂತಹ ಪ್ರಕರಣಗಳು ಇಲಾಖೆಯ ಗಮನಕ್ಕೆ ಬಂದರೆ ಶಿಸ್ತು ಕ್ರಮ ಜರುಗಿಸಲಾಗುವುದು.

- ಮಕ್ಕಳಿಗೆ ಶಾಲಾ-ಕಾಲೇಜುಗಳಲ್ಲಿ ವಸತಿಯುನ್ನು ಕಲ್ಪಿಸುವುದನ್ನು ನಿಷೇಧಿಸಲಾಗಿದೆ.
- ಇಲಾಖೆಯು ರಾಜ್ಯದ ವಿವಿಧ ಸ್ಥಳಗಳಲ್ಲಿ ನಿರ್ಮಿಸಿರುವ ಯಾತ್ರಿ ನಿವಾಸಗಳ ಪಟ್ಟಿಯನ್ನು ಸಹಾಯಕ ನಿರ್ದೇಶಕರು/ಉಪ ನಿರ್ದೇಶಕರಿಂದ ಪಡೆದು ಅಂತಹ ವಸತಿ ಸೌಲಭ್ಯಗಳಲ್ಲಿಯೇ ಆದ್ಯತೆಯ ಮೇರೆಗೆ ವಸತಿ ಕಲ್ಪಿಸುವುದು.
- ಕೆ.ಎಸ್.ಟಿ.ಡಿ.ಸಿ ನಡೆಸುತ್ತಿರುವ ಹೋಟೆಲ್‌ಗಳಲ್ಲಿ/ಯಾತ್ರಿನಿವಾಸ ಆದ್ಯತೆ ಮೇರೆಗೆ ಮಕ್ಕಳಿಗೆ ವಸತಿಯ ವ್ಯವಸ್ಥೆಯನ್ನು ಕಲ್ಪಿಸುವುದು ಕಡ್ಡಾಯವಾಗಿದೆ. ಕೆ.ಎಸ್.ಟಿ.ಡಿ.ಸಿ ಸೌಲಭ್ಯಗಳಲ್ಲಿ ಇಲ್ಲದೇ ಇರುವ ಕಡೆ ಖಾಸಗಿ ಹೋಟೇಲ್‌ಗಳಲ್ಲಿ ಉತ್ತಮ ಊಟ/ವಸತಿ ವ್ಯವಸ್ಥೆ ಕಲ್ಪಿಸುವುದು.
- ಕರ್ನಾಟಕ ದರ್ಶನವನ್ನು ಪೂರ್ಣಗೊಳಿಸಿ ಖರ್ಚು-ವೆಚ್ಚಕ್ಕೆ ಸಂಬಂಧಿಸಿದಂತೆ ಹಣ ಉಪಯೋಗಿತ ಪತ್ರ, ಪ್ರವಾಸದ ಛಾಯಾಚಿತ್ರಗಳು, ಪ್ರವಾಸದ ಬಗ್ಗೆ ಮಕ್ಕಳಿಂದ ಅನಿಸಿಕೆ ಪತ್ರ ವನ್ನು (ಫೀಡ್‌ಬ್ಯಾಕ್ ಫಾರಂ) ಭರ್ತಿಮಾಡಿ ಪಡೆಯುವುದು ಹಾಗೂ ಪ್ರವಾಸದ ಬಗ್ಗೆ ಪ್ರವಾಸೋದ್ಯಮ ಇಲಾಖೆಗೆ ವಿವರವಾದ ವರದಿ ಸಲ್ಲಿಸುವುದು.

**ವಿದ್ಯಾರ್ಥಿಗಳನ್ನು ಹಾಗೂ ಮೇಲ್ವಿಚಾರಕರ ಆಯ್ಕೆಗೆ ಮಾನದಂಡಗಳು :**

**ಮಕ್ಕಳ ಆಯ್ಕೆ:**

- ಸರ್ಕಾರಿ ಪ್ರೌಢಶಾಲೆಗಳಲ್ಲಿ ಕಲಿಯುತ್ತಿರುವ 8, 9 ಮತ್ತು 10ನೇ ತರಗತಿಯ ಮಕ್ಕಳನ್ನು ಸದರಿ ಕಾರ್ಯಕ್ರಮಕ್ಕೆ ಆಯ್ಕೆ ಮಾಡುವುದು. ಇದರಲ್ಲಿ ಹೆಣ್ಣು ಮಕ್ಕಳನ್ನು ಪ್ರತ್ಯೇಕ ಬಸ್ಸಿನಲ್ಲಿ ಕರೆದೊಯ್ಯಬೇಕು.
- ಆರೋಗ್ಯಕರವಾಗಿರುವ ಮಕ್ಕಳನ್ನು ಆಯ್ಕೆ ಮಾಡುವುದು.
- ತಂದೆ ತಾಯಿಗಳಿಂದ ಒಪ್ಪಿಗೆ ಪತ್ರ ಪಡೆಯುವುದು.
- ಕರ್ನಾಟಕ ದರ್ಶನಕ್ಕೆ ವಲಯವಾರು ಶಾಲೆಗಳನ್ನು ಆಯ್ಕೆ ಮಾಡುವಲ್ಲಿ ಪ್ರತಿ ತಾಲ್ಲೂಕಿನಿಂದ ಸರ್ಕಾರಿ ಪ್ರೌಢಶಾಲೆಗಳಲ್ಲಿ 8, 9 ಮತ್ತು 10ನೇ ತರಗತಿಯ ಮಕ್ಕಳನ್ನು ಆಯ್ಕೆ ಮಾಡುವುದು.
- ಯಾವುದೇ ಸಾಂಕ್ರಾಮಿಕ ಕಾಯಿಲೆಗಳಿಂದ ಹಾಗೂ ಧೀರ್ಘಕಾಲಿಕ ಕಾಯಿಲೆಗಳಿಂದ ನರಳುತ್ತಿರುವವರನ್ನು ಕರೆತರಬಾರದು.
- ನದಿ ಮೂಲ, ನದಿ ದಂಡೆಗಳು ಮತ್ತು ಈಜು ಆಡುವಂತಹ ಕ್ರಿಯೆಗಳಲ್ಲಿ ಮಕ್ಕಳನ್ನು ನಿಷೇಧಿಸುವುದು.
- ಜಿಲ್ಲಾ ಗುರಿಗೆ ಅನುಗುಣವಾಗಿ ಪ್ರತಿ ತಾಲ್ಲೂಕಿನ ಮಕ್ಕಳಿಗೆ ಸಮಾನ ಅವಕಾಶ ಲಭಿಸುವಂತೆ ಕ್ರಮ ವಹಿಸುವುದು (ಅನುಬಂಧ-1ನ್ನು ನೋಡುವುದು).

**ಶಿಕ್ಷಕರನ್ನು ಆಯ್ಕೆ ಮಾಡಲು ನಿಗದಿಪಡಿಸಿರುವ ಮಾನದಂಡಗಳು :**

- ಪ್ರತಿ ತಂಡದಲ್ಲಿ ಕಡ್ಡಾಯವಾಗಿ ಇಬ್ಬರು ಪುರುಷ ಶಿಕ್ಷಕರು ಗಂಡು ಮಕ್ಕಳ ತಂಡದಲ್ಲಿ ಹಾಗೂ ಇಬ್ಬರು ಮಹಿಳಾ ಶಿಕ್ಷಕರು ಹೆಣ್ಣು ಮಕ್ಕಳ ತಂಡದಲ್ಲಿರಬೇಕು ಹಾಗೂ ಇವರನ್ನು ಆಯಾ ಜಿಲ್ಲೆಯ ಉಪ ನಿರ್ದೇಶಕರು (ಆಡಳಿತ), ಶಿಕ್ಷಣ ಇಲಾಖೆ ರವರು ಆಯ್ಕೆ ಮಾಡಬೇಕು.

- ಈ ಪೈಕಿ ಒಬ್ಬರು ಸ್ಕೌಟ್ಸ್ & ಗೈಡ್ಸ್ ತರಬೇತಿ ಹೊಂದಿದ ಶಿಕ್ಷಕರಾಗಿರಬೇಕು.
- ಒಬ್ಬರು ವಿಜ್ಞಾನ ಹಾಗೂ ಒಬ್ಬರು ಕಲಾ ಶಿಕ್ಷಕರಾಗಿರಬೇಕು.
- ಪ್ರಥಮ ಚಿಕಿತ್ಸೆ ಜ್ಞಾನವನ್ನು ಹೊಂದಿರಬೇಕು.
- ಆರೋಗ್ಯವಂತ, ಕ್ರಿಯಾಶೀಲ ಉತ್ಸಾಹಿ ಶಿಕ್ಷಕರಾಗಿರಬೇಕು.
- 50 ವರ್ಷಕ್ಕಿಂತ ಕಡಿಮೆ ವಯೋಮಾನದವರಾಗಿರಬೇಕು.
- ಪ್ರವಾಸ ಹೋಗುವ ಸ್ಥಳದ ಪರಿಚಯವನ್ನು ಮನಗಂಡಿರಬೇಕು.
- ಪ್ರತಿ ತಂಡಕ್ಕೂ ಬೇರೆ ಬೇರೆ ಶಿಕ್ಷಕರನ್ನು ಆಯ್ಕೆ ಮಾಡಬೇಕು.

**ಕರ್ನಾಟಕ ದರ್ಶನ ವೇಳಾಪಟ್ಟಿ :**

1. ಕರ್ನಾಟಕ ದರ್ಶನ ಪ್ರವಾಸವನ್ನು ಅಕ್ಟೋಬರ್–2015 ರೊಳಗೆ ಪೂರ್ಣಗೊಳಿಸುವುದು.
2. ಎಲ್ಲಾ ಮಕ್ಕಳಿಗೆ ಮುಂಚಿತವಾಗಿ ಪ್ರವಾಸ ವೇಳಾಪಟ್ಟಿ ಪ್ರವಾಸಿ ತಾಣಗಳ ರೂಟ್ ಮ್ಯಾಪ್ ಮತ್ತು ವಿವರಗಳನ್ನು ನೀಡುವುದು.
3. ಇಡೀ ಪ್ರವಾಸದ ಕಾರ್ಯಕ್ರಮದಲ್ಲಿ ರಾತ್ರಿ ವೇಳೆ ತಂಗುವ ವ್ಯವಸ್ಥೆಯನ್ನು ಮುಂಚಿತವಾಗಿಯೇ ಉಪ ನಿರ್ದೇಶಕರು/ಸಹಾಯಕ ನಿರ್ದೇಶಕರು ರವರ ನೇತೃತ್ವದಲ್ಲಿ ವ್ಯವಸ್ಥೆ ಮಾಡುವುದು.
4. ಎಲ್ಲಾ ಪೋಷಕರಿಗೂ ಪ್ರವಾಸಕ್ಕೆ ಹೋಗುವ ಶಿಕ್ಷಕರ ದೂರವಾಣಿ ಸಂಖ್ಯೆಯನ್ನು ಕಡ್ಡಾಯವಾಗಿ ನೀಡುವುದು.
5. ಪ್ರತಿ ಬಸ್ಸಿನಲ್ಲಿ ಪ್ರಾಥಮಿಕ ಚಿಕಿತ್ಸಾ ಕಿಟ್ ಮತ್ತು ಕೆಲ ಸಾಮಾನ್ಯ ಔಷಧಿಗಳನ್ನು ಕಡ್ಡಾಯವಾಗಿ ಕೊಂಡೊಯ್ಯತಕ್ಕದ್ದು.
6. ಜಿಲ್ಲಾ ಕಛೇರಿಯಿಂದ ಕ್ರೋಢೀಕರಣ ವರದಿ, ವೆಚ್ಚದ ವಿವರ, ಪ್ರವಾಸಕ್ಕೆ ಹೊರಟ ಮಕ್ಕಳ ವಿವರ (ವರ್ಗವಾರು ಕ್ರೋಢೀಕರಣ ನೀಡುವುದು) ಹಾಗೂ ದಾಖಲೀಕರಣದ ಪ್ರತಿ ಛಾಯಾಚಿತ್ರ ಸಮೇತ ಸಲ್ಲಿಸುವುದು.
7. ಪ್ರವಾಸ ಪೂರ್ಣಗೊಂಡ 30 ದಿನಗಳೊಳಗಾಗಿ ದಾಖಲಾತಿಗಳೊಂದಿಗೆ ಖರ್ಚುವೆಚ್ಚಗಳ ಪಟ್ಟಿಯೊಂದಿಗೆ ಅನುಪಾಲನಾ ವರದಿಯನ್ನು ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಬೆಂಗಳೂರು ರವರಿಗೆ ನೀಡುವುದು.

(ಬಿ.ಎನ್. ಯತಿರಾಜ್)
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ

## ಪ್ರಶ್ನೆ ಸಂಖ್ಯೆ: 1681 ಕ್ಕೆ ಅನುಬಂಧ-2

2020-25ರ ಪ್ರವಾಸೋದ್ಯಮ ನೀತಿಯ ಅಡಿಯಲ್ಲಿ ಪ್ರಸ್ತಾವಿಸಿರುವ ಪ್ರವಾಸೋದ್ಯಮ ಯೋಜನೆಗಳಿಗೆ ನೀಡಲಾಗುವ ಬಂಡವಾಳ ಹೂಡಿಕೆ ಸಹಾಯಧನದ ವಿವರಗಳನ್ನು ಈ ಕೆಳಕಂಡ ಕೋಷ್ಟಕದಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

| ಕ್ರ ಸಂ | ಪ್ರವಾಸೋದ್ಯಮ ಯೋಜನೆ | ಯೋಜನೆಗಾಗಿ ಕನಿಷ್ಠ ಇಪಿಸಿ ಹೂಡಿಕೆ (ರೂ.ಗಳಲ್ಲಿ) | ಇಪಿಸಿ ಯ ಶೇಕಡಾವಾರು ಸಹಾಯಧನ (%) | ಬಂಡವಾಳ ಹೂಡಿಕೆ ಸಹಾಯಧನದ ಗರಿಷ್ಠ ಮಿತಿ | ಸಹಾಯಧನ ನೀಡಬೇಕಾದ ಸ್ಥಳಗಳು |
|---|---|---|---|---|---|
| 1 | ಸಾಹಸ (ಅಡ್ವೆಂಚರ್) ಪ್ರವಾಸೋದ್ಯಮ ಯೋಜನೆ | 25 ಲಕ್ಷ ರೂಪಾಯಿಗಳು | ಶೇಕಡಾ 25ರಷ್ಟು | 2 ಕೋಟಿ ರೂಪಾಯಿಗಳು | ಆದ್ಯತಾ ಪ್ರವಾಸಿ ತಾಣಗಳು |
| 2 | ಕಾರವಾನ್ ಪಾರ್ಕ್ ಯೋಜನೆ | 50 ಲಕ್ಷ ರೂಪಾಯಿಗಳು | ಶೇಕಡಾ 25ರಷ್ಟು | 2 ಕೋಟಿ ರೂಪಾಯಿಗಳು | ಕರ್ನಾಟಕದಲ್ಲಿ ಎಲ್ಲಾ ಪ್ರವಾಸಿ ತಾಣಗಳು |
| 3 | ಕಾರವಾನ್ ಪ್ರವಾಸೋದ್ಯಮ ಯೋಜನೆ | 25 ಲಕ್ಷ ರೂಪಾಯಿಗಳು | ಶೇಕಡಾ 25ರಷ್ಟು | 1 ಕೋಟಿ ರೂಪಾಯಿಗಳು | ಕರ್ನಾಟಕದಲ್ಲಿ ಎಲ್ಲಾ ಪ್ರವಾಸಿ ತಾಣಗಳು |
| 4 | ಹೋಟೆಲ್ ಯೋಜನೆ ಬಜೆಟ್ | 5 ಕೋಟಿ ರೂಪಾಯಿಗಳು | ಶೇಕಡಾ 15ರಷ್ಟು | 2 ಕೋಟಿ ರೂಪಾಯಿಗಳು | ಆದ್ಯತಾ ಪ್ರವಾಸೋದ್ಯಮ ತಾಣಗಳು (ಬೆಂಗಳೂರು, ಹುಬ್ಬಳ್ಳಿ-ಧಾರವಾಡ, ಮಂಗಳೂರು ಮತ್ತು ಮೈಸೂರು ನಗರಪಾಲಿಕೆಗಳು/ ಮಹಾನಗರ ಪಾಲಿಕೆಗಳ ವ್ಯಾಪ್ತಿ ಹೊರತುಪಡಿಸಿ,) |
| 5 | ಹೋಟೆಲ್ ಯೋಜನೆ/ ಪ್ರೀಮಿಯಂ | 10 ಕೋಟಿ ರೂಪಾಯಿಗಳು | ಶೇಕಡಾ 15ರಷ್ಟು | 5 ಕೋಟಿ ರೂಪಾಯಿಗಳು | ಆದ್ಯತಾ ಪ್ರವಾಸೋದ್ಯಮ ತಾಣಗಳು (ಬೆಂಗಳೂರು, ಹುಬ್ಬಳ್ಳಿ-ಧಾರವಾಡ, ಮಂಗಳೂರು ಮತ್ತು ಮೈಸೂರು ನಗರಪಾಲಿಕೆಗಳು/ ಮಹಾನಗರ ಪಾಲಿಕೆಗಳ ವ್ಯಾಪ್ತಿ ಹೊರತುಪಡಿಸಿ,) |
| 6 | ಹೌಸ್‌ಬೋಟ್ ಯೋಜನೆ | 1 ಕೋಟಿ ರೂಪಾಯಿಗಳು | ಶೇಕಡಾ 25ರಷ್ಟು | 2 ಕೋಟಿ ರೂಪಾಯಿಗಳು | ಕರ್ನಾಟಕದಲ್ಲಿ ಎಲ್ಲಾ ಪ್ರವಾಸಿ ತಾಣಗಳು |

| ಕ್ರ ಸಂ | ಪ್ರವಾಸೋದ್ಯಮ ಯೋಜನೆ | ಯೋಜನೆಗಾಗಿ ಕನಿಷ್ಠ ಇಪಿಸಿ ಹೂಡಿಕೆ (ರೂ.ಗಳಲ್ಲಿ) | ಇಪಿಸಿ ಯ ಶೇಕಡಾವಾರು ಸಹಾಯಧನ (%) | ಬಂಡವಾಳ ಹೂಡಿಕೆ ಸಹಾಯಧನದ ಗರಿಷ್ಠ ಮಿತಿ | ಸಹಾಯಧನ ನೀಡಬೇಕಾದ ಸ್ಥಳಗಳು |
|---|---|---|---|---|---|
| 7 | ರಸ್ತೆ ಬದಿ (ವೇ ಸೈಡ್) ಸೌಕರ್ಯಗಳು | 2 ಕೋಟಿ ರೂಪಾಯಿಗಳು | ಶೇಕಡಾ 25ರಷ್ಟು | 2 ಕೋಟಿ ರೂಪಾಯಿಗಳು | ಕರ್ನಾಟಕದಲ್ಲಿ ಎಲ್ಲಾ ಪ್ರವಾಸಿ ತಾಣಗಳು |
| 8 | ಸ್ವಾಸ್ಥ್ಯ ಕೇಂದ್ರ | 2 ಕೋಟಿ ರೂಪಾಯಿಗಳು | ಶೇಕಡಾ 25ರಷ್ಟು | 2 ಕೋಟಿ ರೂಪಾಯಿಗಳು | ಆದ್ಯತಾ ಪ್ರವಾಸೋದ್ಯಮ ತಾಣಗಳು |

ಪ್ರವಾಸೋದ್ಯಮ ಯೋಜನೆಯಿಂದ ಮಹಿಳೆಯರು, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ವಿಕಲಚೇತನ ಉದ್ಯಮಿಗಳು, ಕಲ್ಯಾಣ ಕರ್ನಾಟಕ ಭಾಗದ ಜಿಲ್ಲೆಗಳಿಗೆ ಅರ್ಹ ಯೋಜನಾ ಮೊತ್ತದ ಗರಿಷ್ಠ ಶೇ.5% ರಷ್ಟು ಹೆಚ್ಚುವರಿಯಾಗಿ ಸಹಾಯಧನ ಒದಗಿಸಲಾಗುವುದು.

**********

ಪ್ರ. ಸಂ. 1681ಕ್ಕೆ ಅನುಬಂಧ-3

## 2018-19 ಪ್ರವಾಸಿ ಟ್ಯಾಕ್ಸಿ ಸಹಾಯಧನ ಯೋಜನೆ

(ರೂ.ಲಕ್ಷಗಳಲ್ಲಿ)

| ಕ್ರ. ಸಂ. | ಜಿಲ್ಲೆಯ ಹೆಸರು | ಪರಿಶಿಷ್ಟ ಜಾತಿ | | | | ಪರಿಶಿಷ್ಟ ಪಂಗಡ | | | | ಹಿಂದುಳಿದ ಹಾಗೂ ಅಲ್ಪಸಂಖ್ಯಾತರು | | | | ಒಟ್ಟು | | | |
|---|---|---|---|---|---|---|---|---|---|---|---|---|---|---|---|---|---|
| | | ಭೌತಿಕ ಪ್ರಗತಿ | | ಆರ್ಥಿಕ ಪ್ರಗತಿ | | ಭೌತಿಕ ಪ್ರಗತಿ | | ಆರ್ಥಿಕ ಪ್ರಗತಿ | | ಭೌತಿಕ ಪ್ರಗತಿ | | ಆರ್ಥಿಕ ಪ್ರಗತಿ | | ಭೌತಿಕ ಪ್ರಗತಿ | | ಆರ್ಥಿಕ ಪ್ರಗತಿ | |
| | | ಗುರಿ | ಸಾಧನೆ | ಬಿಡುಗಡೆ ಮಾಡಿರುವ ಅನುದಾನ | ಸಹಾಯಧನವಿತರಿಸಿರುವ ಅನುದಾನ | ಗುರಿ | ಸಾಧನೆ | ಬಿಡುಗಡೆ ಮಾಡಿರುವ ಅನುದಾನ | ಸಹಾಯಧನವಿತರಿಸಿರುವ ಅನುದಾನ | ಗುರಿ | ಸಾಧನೆ | ಬಿಡುಗಡೆ ಮಾಡಿರುವ ಅನುದಾನ | ಸಹಾಯಧನ ವಿತರಿಸಿರುವ ಅನುದಾನ | ಒಟ್ಟು ಗುರಿ | ಒಟ್ಟು ಸಾಧನೆ | ಬಿಡುಗಡೆ ಮಾಡಿರುವ ಅನುದಾನ | ಸಹಾಯಧನ ವಿತರಿಸಿರುವ ಅನುದಾನ |
| 1 | ಬೆಂಗಳೂರು ನಗರ | 21 | 21 | 63.00 | 63.00 | 4 | 4 | 12.00 | 12.00 | 22 | 22 | 66.00 | 66.00 | 47 | 47 | 141.00 | 141.00 |
| 2 | ಬೆಂಗಳೂರು (ಗ್ರಾ) | 6 | 6 | 18.00 | 18.00 | 2 | 2 | 6.00 | 6.00 | 4 | 4 | 12.00 | 12.00 | 12 | 12 | 36.00 | 36.00 |
| 3 | ರಾಮನಗರ | 11 | 8 | 33.00 | 24.00 | 4 | 4 | 12.00 | 12.00 | 8 | 7 | 24.00 | 21.00 | 23 | 19 | 69.00 | 57.00 |
| 4 | ಚಿತ್ರದುರ್ಗ | 15 | 13 | 45.00 | 39.00 | 8 | 8 | 24.00 | 24.00 | 9 | 8 | 27.00 | 24.00 | 32 | 29 | 96.00 | 87.00 |
| 5 | ದಾವಣಗೆರೆ | 11 | 10 | 33.00 | 30.00 | 5 | 4 | 15.00 | 12.00 | 8 | 7 | 24.00 | 21.00 | 24 | 21 | 72.00 | 63.00 |
| 6 | ಕೋಲಾರ | 14 | 14 | 42.00 | 42.00 | 4 | 4 | 12.00 | 12.00 | 9 | 9 | 27.00 | 27.00 | 27 | 27 | 81.00 | 81.00 |
| 7 | ಚಿಕ್ಕಬಳ್ಳಾಪುರ | 14 | 14 | 42.00 | 42.00 | 6 | 6 | 18.00 | 18.00 | 10 | 10 | 30.00 | 30.00 | 30 | 30 | 90.00 | 90.00 |
| 8 | ಶಿವಮೊಗ್ಗ | 15 | 15 | 45.00 | 45.00 | 5 | 5 | 15.00 | 15.00 | 11 | 11 | 33.00 | 33.00 | 31 | 31 | 93.00 | 93.00 |
| 9 | ತುಮಕೂರು | 23 | 0 | 69.00 | 0.00 | 9 | 0 | 27.00 | 0.00 | 17 | 0 | 51.00 | 0.00 | 49 | 0 | 147.00 | 0.00 |
| 10 | ಮಂಡ್ಯ | 16 | 14 | 48.00 | 42.00 | 5 | 5 | 15.00 | 15.00 | 13 | 12 | 39.00 | 36.00 | 34 | 31 | 102.00 | 93.00 |
| 11 | ಚಿಕ್ಕಮಗಳೂರು | 12 | 12 | 36.00 | 36.00 | 4 | 4 | 12.00 | 12.00 | 10 | 10 | 30.00 | 30.00 | 26 | 26 | 78.00 | 78.00 |
| 12 | ದಕ್ಷಿಣ ಕನ್ನಡ | 9 | 7 | 27.00 | 21.00 | 4 | 4 | 12.00 | 12.00 | 9 | 9 | 27.00 | 27.00 | 22 | 20 | 66.00 | 60.00 |
| 13 | ಉಡುಪಿ | 5 | 5 | 15.00 | 15.00 | 2 | 2 | 6.00 | 6.00 | 5 | 5 | 15.00 | 15.00 | 12 | 12 | 36.00 | 36.00 |
| 14 | ಹಾಸನ | 19 | 18 | 57.00 | 54.00 | 6 | 4 | 18.00 | 12.00 | 14 | 14 | 42.00 | 42.00 | 39 | 36 | 117.00 | 108.00 |
| 15 | ಕೊಡಗು | 7 | 7 | 21.00 | 21.00 | 3 | 3 | 9.00 | 9.00 | 5 | 5 | 15.00 | 15.00 | 15 | 15 | 45.00 | 45.00 |
| 16 | ಮೈಸೂರು | 17 | 17 | 51.00 | 51.00 | 8 | 8 | 24.00 | 24.00 | 12 | 12 | 36.00 | 36.00 | 37 | 37 | 111.00 | 111.00 |
| 17 | ಚಾಮರಾಜನಗರ | 10 | 8 | 30.00 | 24.00 | 4 | 3 | 12.00 | 9.00 | 6 | 4 | 18.00 | 12.00 | 20 | 15 | 60.00 | 45.00 |
| 18 | ಬೆಳಗಾವಿ | 22 | 22 | 66.00 | 66.00 | 9 | 9 | 27.00 | 27.00 | 19 | 19 | 57.00 | 57.00 | 50 | 50 | 150.00 | 150.00 |
| 19 | ವಿಜಯಪುರ | 13 | 13 | 39.00 | 39.00 | 3 | 3 | 9.00 | 9.00 | 9 | 9 | 27.00 | 27.00 | 25 | 25 | 75.00 | 75.00 |
| 20 | ಬಾಗಲಕೋಟೆ | 11 | 11 | 33.00 | 33.00 | 4 | 4 | 12.00 | 12.00 | 8 | 8 | 24.00 | 24.00 | 23 | 23 | 69.00 | 69.00 |
| 21 | ಧಾರವಾಡ | 7 | 7 | 21.00 | 21.00 | 3 | 3 | 9.00 | 9.00 | 7 | 7 | 21.00 | 21.00 | 17 | 17 | 51.00 | 51.00 |
| 22 | ಗದಗ | 8 | 8 | 24.00 | 24.00 | 3 | 3 | 9.00 | 9.00 | 6 | 6 | 18.00 | 18.00 | 17 | 17 | 51.00 | 51.00 |
| 23 | ಹಾವೇರಿ | 12 | 11 | 36.00 | 33.00 | 6 | 6 | 18.00 | 18.00 | 10 | 10 | 30.00 | 30.00 | 28 | 27 | 84.00 | 81.00 |
| 24 | ಉತ್ತರ ಕನ್ನಡ | 17 | 17 | 51.00 | 51.00 | 6 | 6 | 18.00 | 18.00 | 14 | 14 | 42.00 | 42.00 | 37 | 37 | 111.00 | 111.00 |
| 25 | ಬಳ್ಳಾರಿ | 18 | 17 | 54.00 | 51.00 | 10 | 10 | 30.00 | 30.00 | 11 | 11 | 33.00 | 33.00 | 39 | 38 | 117.00 | 114.00 |
| 26 | ಬೀದರ್ | 12 | 12 | 36.00 | 36.00 | 6 | 6 | 18.00 | 18.00 | 8 | 8 | 24.00 | 24.00 | 26 | 26 | 78.00 | 78.00 |
| 27 | ಕಲಬುರಗಿ | 21 | 21 | 63.00 | 63.00 | 6 | 3 | 18.00 | 9.00 | 14 | 10 | 42.00 | 30.00 | 41 | 34 | 123.00 | 102.00 |
| 28 | ಯಾದಗಿರಿ | 9 | 9 | 27.00 | 27.00 | 4 | 4 | 12.00 | 12.00 | 6 | 6 | 18.00 | 18.00 | 19 | 19 | 57.00 | 57.00 |
| 29 | ರಾಯಚೂರು | 15 | 7 | 45.00 | 21.00 | 9 | 5 | 27.00 | 15.00 | 10 | 5 | 30.00 | 15.00 | 34 | 17 | 102.00 | 51.00 |
| 30 | ಕೊಪ್ಪಳ | 10 | 9 | 30.00 | 27.00 | 5 | 5 | 15.00 | 15.00 | 7 | 7 | 21.00 | 21.00 | 22 | 21 | 66.00 | 63.00 |
| | ಒಟ್ಟು | 400 | 353 | 1200.00 | 1059 | 157 | 137 | 471.00 | 411 | 301 | 269 | 903.00 | 807 | 858 | 759 | 2574.00 | 2277.00 |

<u>ಅನುಬಂಧ-3</u>

<u>2019-20 ಪ್ರವಾಸಿ ಟ್ಯಾಕ್ಸಿ ಸಹಾಯಧನ ಯೋಜನೆ</u>

(ರೂ.ಲಕ್ಷಗಳಲ್ಲಿ)

| ಕ್ರ. ಸಂ. | ಜಿಲ್ಲೆಯ ಹೆಸರು | ಪರಿಶಿಷ್ಟ ಜಾತಿ | | | | ಪರಿಶಿಷ್ಟ ಪಂಗಡ | | | | | ಹಿಂದುಳಿದ ಹಾಗೂ ಅಲ್ಪಸಂಖ್ಯಾತರು | | | | ಒಟ್ಟು | | | | |
|---|---|---|---|---|---|---|---|---|---|---|---|---|---|---|---|---|---|---|---|
| | | ಭೌತಿಕ ಪ್ರಗತಿ | | ಆರ್ಥಿಕ ಪ್ರಗತಿ | | ಭೌತಿಕ ಪ್ರಗತಿ | | | ಆರ್ಥಿಕ ಪ್ರಗತಿ | | ಭೌತಿಕ ಪ್ರಗತಿ | | ಆರ್ಥಿಕ ಪ್ರಗತಿ | | ಭೌತಿಕ ಪ್ರಗತಿ | | | ಆರ್ಥಿಕ ಪ್ರಗತಿ | |
| | | ಗುರಿ | ಸಾಧನೆ | ಬಿಡುಗಡೆ ಮಾಡಿರುವ ಅನುದಾನ | ಸಹಾಯಧನ ವಿತರಿಸಿರುವ ಅನುದಾನ | ಗುರಿ | ಸಾಧನೆ | ಬಾಕಿ | ಬಿಡುಗಡೆ ಮಾಡಿರುವ ಅನುದಾನ | ಸಹಾಯಧನ ವಿತರಿಸಿರುವ ಅನುದಾನ | ಗುರಿ | ಸಾಧನೆ | ಬಿಡುಗಡೆ ಮಾಡಿರುವ ಅನುದಾನ | ಸಹಾಯಧನ ವಿತರಿಸಿರುವ ಅನುದಾನ | ಒಟ್ಟು ಗುರಿ | ಒಟ್ಟು ಸಾಧನೆ | ಒಟ್ಟು ಬಾಕಿ | ಬಿಡುಗಡೆ ಮಾಡಿರುವ ಅನುದಾನ | ಸಹಾಯಧನ ವಿತರಿಸಿರುವ ಅನುದಾನ |
| 1 | ಬೆಂಗಳೂರು ನಗರ | 10 | 4 | 12.00 | 12.00 | 2 | 1 | 1 | 3.00 | 3.00 | 19 | 5 | 15.00 | 15.00 | 31 | 10 | 21 | 93.00 | 30.00 |
| 2 | ಬೆಂಗಳೂರು (ಗ್ರಾ) | 3 | 3 | 9.00 | 9.00 | 1 | 1 | 0 | 3.00 | 3.00 | 4 | 4 | 12.00 | 12.00 | 8 | 8 | 0 | 24.00 | 24.00 |
| 3 | ರಾಮನಗರ | 5 | 0 | 9.00 | 0.00 | 2 | 0 | 2 | 3.00 | 0.00 | 7 | 0 | 10.75 | 0.00 | 14 | 0 | 14 | 42.00 | 0.00 |
| 4 | ಚಿತ್ರದುರ್ಗ | 7 | 5 | 9.00 | 15.00 | 3 | 3 | 0 | 4.00 | 9.00 | 8 | 8 | 15.00 | 24.00 | 18 | 16 | 2 | 54.00 | 48.00 |
| 5 | ದಾವಣಗೆರೆ | 5 | 3 | 9.00 | 9.00 | 2 | 1 | 1 | 2.75 | 3.00 | 7 | 5 | 16.00 | 15.00 | 14 | 9 | 5 | 42.00 | 27.00 |
| 6 | ಕೋಲಾರ | 7 | 3 | 12.00 | 9.00 | 2 | 1 | 1 | 4.00 | 3.00 | 7 | 7 | 21.00 | 21.00 | 16 | 11 | 5 | 48.00 | 33.00 |
| 7 | ಚಿಕ್ಕಬಳ್ಳಾಪುರ | 7 | 0 | 12.00 | 0.00 | 3 | 0 | 3 | 4.00 | 0.00 | 8 | 0 | 15.00 | 0.00 | 18 | 0 | 18 | 54.00 | 0.00 |
| 8 | ಶಿವಮೊಗ್ಗ | 7 | 7 | 21.00 | 21.00 | 2 | 2 | 0 | 6.00 | 6.00 | 10 | 10 | 30.00 | 30.00 | 19 | 19 | 0 | 57.00 | 57.00 |
| 9 | ತುಮಕೂರು | 11 | 0 | 12.00 | 0.00 | 4 | 0 | 4 | 4.00 | 0.00 | 14 | 0 | 15.00 | 0.00 | 29 | 0 | 29 | 87.00 | 0.00 |
| 10 | ಮಂಡ್ಯ | 8 | 0 | 15.00 | 0.00 | 2 | 0 | 2 | 0.50 | 0.00 | 11 | 0 | 15.00 | 0.00 | 21 | 0 | 21 | 63.00 | 0.00 |
| 11 | ಚಿಕ್ಕಮಗಳೂರು | 6 | 6 | 18.00 | 18.00 | 2 | 2 | 0 | 6.00 | 6.00 | 8 | 8 | 24.00 | 24.00 | 16 | 16 | 0 | 48.00 | 48.00 |
| 12 | ದಕ್ಷಿಣ ಕನ್ನಡ | 4 | 3 | 12.00 | 9.00 | 2 | 2 | 0 | 6.00 | 6.00 | 8 | 7 | 24.00 | 21.00 | 14 | 12 | 2 | 42.00 | 36.00 |
| 13 | ಉಡುಪಿ | 2 | 2 | 6.00 | 6.00 | 1 | 1 | 0 | 3.00 | 3.00 | 5 | 5 | 15.00 | 15.00 | 8 | 8 | 0 | 24.00 | 24.00 |
| 14 | ಹಾಸನ | 9 | 0 | 12.00 | 0.00 | 3 | 0 | 3 | 1.00 | 0.00 | 12 | 0 | 9.00 | 0.00 | 24 | 0 | 24 | 72.00 | 0.00 |
| 15 | ಕೊಡಗು | 3 | 3 | 9.00 | 9.00 | 1 | 1 | 0 | 3.00 | 3.00 | 5 | 5 | 15.00 | 15.00 | 9 | 9 | 0 | 27.00 | 27.00 |
| 16 | ಮೈಸೂರು | 8 | 0 | 24.00 | 0.00 | 4 | 0 | 4 | 12.00 | 0.00 | 11 | 0 | 33.00 | 0.00 | 23 | 0 | 23 | 69.00 | 0.00 |
| 17 | ಚಾಮರಾಜನಗರ | 5 | 0 | 15.00 | 0.00 | 2 | 0 | 2 | 6.00 | 0.00 | 5 | 0 | 15.00 | 0.00 | 12 | 0 | 12 | 36.00 | 0.00 |
| 18 | ಬೆಳಗಾವಿ | 10 | 6 | 18.25 | 18.00 | 4 | 1 | 3 | 4.00 | 3.00 | 17 | 16 | 48.00 | 48.00 | 31 | 23 | 8 | 93.00 | 69.00 |
| 19 | ವಿಜಯಪುರ | 6 | 6 | 9.00 | 18.00 | 2 | 1 | 1 | 4.00 | 3.00 | 8 | 8 | 24.00 | 24.00 | 16 | 15 | 1 | 48.00 | 45.00 |
| 20 | ಬಾಗಲಕೋಟೆ | 5 | 5 | 15.00 | 15.00 | 2 | 2 | 0 | 6.00 | 6.00 | 7 | 7 | 21.00 | 21.00 | 14 | 14 | 0 | 42.00 | 42.00 |
| 21 | ಧಾರವಾಡ | 4 | 4 | 12.00 | 12.00 | 1 | 1 | 0 | 3.00 | 3.00 | 6 | 6 | 18.00 | 18.00 | 11 | 11 | 0 | 33.00 | 33.00 |
| 22 | ಗದಗ | 4 | 4 | 12.00 | 12.00 | 1 | 1 | 0 | 3.00 | 3.00 | 5 | 5 | 15.00 | 15.00 | 10 | 10 | 0 | 30.00 | 30.00 |
| 23 | ಹಾವೇರಿ | 6 | 3 | 9.00 | 9.00 | 3 | 1 | 2 | 4.00 | 3.00 | 9 | 5 | 15.00 | 15.00 | 18 | 9 | 9 | 54.00 | 27.00 |
| 24 | ಉತ್ತರ ಕನ್ನಡ | 8 | 8 | 24.00 | 24.00 | 3 | 3 | 0 | 9.00 | 9.00 | 12 | 12 | 36.00 | 36.00 | 23 | 23 | 0 | 69.00 | 69.00 |
| 25 | ಬಳ್ಳಾರಿ | 8 | 5 | 24.00 | 15.00 | 4 | 4 | 0 | 12.00 | 12.00 | 10 | 9 | 30.00 | 27.00 | 22 | 18 | 4 | 66.00 | 54.00 |
| 26 | ಬೀದರ್ | 6 | 1 | 4.00 | 3.00 | 3 | 3 | 0 | 9.00 | 9.00 | 7 | 7 | 21.00 | 21.00 | 16 | 11 | 5 | 48.00 | 33.00 |
| 27 | ಕಲಬುರಗಿ | 10 | 0 | 4.00 | 0.00 | 3 | 0 | 3 | 9.00 | 0.00 | 12 | 12 | 36.00 | 36.00 | 25 | 12 | 13 | 75.00 | 36.00 |
| 28 | ಯಾದಗಿರಿ | 4 | 4 | 9.00 | 12.00 | 2 | 2 | 0 | 4.00 | 6.00 | 5 | 5 | 15.00 | 15.00 | 11 | 11 | 0 | 33.00 | 33.00 |
| 29 | ರಾಯಚೂರು | 7 | 1 | 6.50 | 3.00 | 4 | 0 | 4 | 6.50 | 0.00 | 9 | 8 | 27.00 | 24.00 | 20 | 9 | 11 | 60.00 | 27.00 |
| 30 | ಕೊಪ್ಪಳ | 5 | 4 | 12.00 | 12.00 | 2 | 2 | 0 | 6.00 | 6.00 | 6 | 6 | 18.00 | 18.00 | 13 | 12 | 1 | 39.00 | 36.00 |
| | ಒಟ್ಟು | 190 | 90 | 374.75 | 270.00 | 72 | 36 | 36 | 150.75 | 108.00 | 262 | 170 | 623.75 | 510.00 | 524 | 296 | 228 | 1572.00 | 888.00 |

## ಪ್ರಶ್ನೆ ಸಂಖ್ಯೆ: 1681 ಕ್ಕೆ ಅನುಬಂಧ-4

2018-19ನೇ ಸಾಲಿನಲ್ಲಿ 2015-20ರ ಪ್ರವಾಸೋದ್ಯಮ ನೀತಿಯನ್ವಯ ಹೋಟೆಲ್/ರೆಸಾರ್ಟ್ಸ್ ಯೋಜನೆಗಳಿಗೆ ಸಹಾಯಧನವನ್ನು ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ ರವರಿಗೆ ಬಿಡುಗಡೆ ಮಾಡಿರುವ ವಿವರ.

(ರೂ.ಲಕ್ಷಗಳಲ್ಲಿ)

| ಕ್ರಮ ಸಂ | ಹೋಟೆಲ್/ರೆಸಾರ್ಟ್ಸ್ ಯೋಜನೆಗಳ ಹೆಸರು ಮತ್ತು ವಿಳಾಸ | ಸಹಾಯಧನ ಬಿಡುಗಡೆ ಮಾಡಿರುವ ಮೊತ್ತ |
|---|---|---|
| | ಉಡುಪಿ ಜಿಲ್ಲೆ | |
| 1 | ಮೆ: ಮಾಲ್ಗುಡಿ ಕಂಫರ್ಟ್ಸ್, ಯಾತ್ರಿ ನಿವಾಸ, ವಾರಂಬಳ್ಳಿ ಗ್ರಾಮ, ಬ್ರಹ್ಮಾವರ, ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ | 26,39,600 |
| 2 | ಮೆ: ಗ್ರ್ಯಾಂಡ್ ದಿ ಹಿಮಾಲಯ, ಹೋಟೆಲ್ ಮತ್ತು ರೆಸಾರ್ಟ್ಸ್ ಪ್ರೈ.ಲಿ. ಕಡಿಯಾಳಿ ಜಂಕ್ಷನ್, ಮಣಿಪಾಲ, ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ. | 65,00,000 |
| 3 | ಮೆ: ಗಾಯಿತ್ರಿ ಕಂಫರ್ಟ್ಸ್, ಬೋರ್ಡಿಂಗ್ ಮತ್ತು ಲಾಡ್ಜಿಂಗ್, ಕುಂಭಾಶಿ ಗ್ರಾಮ, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ. | 41,86,762 |
| 4 | ಮೆ: ಸಹನಾ ಹೋಟೆಲ್, ಕೋಟೇಶ್ವರ, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ. | 41,00,000 |
| 5 | ಮೆ: ನ್ಲಯತ್ ಸುಪ್ರೀಮ್, ನಡ್ಸಾಲ-ಗ್ರಾಮ, ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ. | 65,00,000 |
| 6 | ಮೆ: ಮಂದಾರ ಯಾತ್ರಿ ನಿವಾಸ, ಪಡು ಗ್ರಾಮ, ಕಾಪು ತಾಲ್ಲೂಕು, ಉಡುಪಿ ಜಿಲ್ಲೆ. | 60,00,000 |
| 7 | ಮೆ: ಅಂಬಿಕಾ ಇಂಟರ್ ನ್ಯಾಷನಲ್, ಯಡ್ತಾರೆ ಗ್ರಾಮ, ಬೈಂದೂರು ತಾಲ್ಲೂಕು, ಉಡುಪಿ ಜಿಲ್ಲೆ. | 65,00,000 |
| 8 | ಮೆ: ಅಮರಾವತಿ, ಹೆಬ್ರಿ ಗ್ರಾಮ, ಕಾರ್ಕಳ ತಾಲ್ಲೂಕು, ಉಡುಪಿ ಜಿಲ್ಲೆ. | 43,23,950 |
| 9 | ಮೆ: ಅನಗ ಬೋಡಿಂಗ್ ಮತ್ತು ಲಾಡ್ಜಿಂಗ್, ಹೊಸೂರು ಗ್ರಾಮ, ಕರ್ಜೆ, ಉಡುಪಿ ತಾಲ್ಲೂಕು ಮತ್ತು ಜಿಲ್ಲೆ. | 62,23,563 |
| | ಮಂಡ್ಯ ಜಿಲ್ಲೆ | |
| 10 | ಮೆ; ಯೋಗಧಾಮ (ಆಯುರ್ವೇದ, ಪಂಚಾಕರ್ಮ ಚಿಕಿತ್ಸೆ ಮತ್ತು ಯೋಗಕೇಂದ್ರ), ಶ್ರೀರಂಗಪಟ್ಟಣ. | 61,23,165 |
| | ಚಿಕ್ಕಮಗಳೂರು ಜಿಲ್ಲೆ | |
| 11 | ಮೆ: ಮಿಲನ್ ಎಂಟರ್‌ಪ್ರೈಸಸ್, ಮಿಲನ್ ಥಿಯೇಟರ್ ಹತ್ತಿರ, ಚಿಕ್ಕಮಗಳೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ | 1,20,00,000 |
| | ಬೆಂಗಳೂರು ಗ್ರಾಮಾಂತರ ಜಿಲ್ಲೆ | |
| 12 | ಮೆ: ಹೋಟೆಲ್ ಶತಾಯು ವೇಲನೆಸ್ ರಿಟ್ರೀಟ್, ಆವತಿ ಗ್ರಾಮ, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | 60,00,000 |

| ಕ್ರಮ ಸಂ | ಹೋಟೆಲ್/ರೆಸಾರ್ಟ್ಸ್ ಯೋಜನೆಗಳ ಹೆಸರು ಮತ್ತು ವಿಳಾಸ | ಸಹಾಯಧನ ಬಿಡುಗಡೆ ಮಾಡಿರುವ ಮೊತ್ತ |
|---|---|---|
| | ದಕ್ಷಿಣ ಕನ್ನಡ ಜಿಲ್ಲೆ | |
| 13 | ಮೆ। ಶ್ರೀ ರಾಮ್ ರೆಸಿಡೆನ್ಸಿ, ಮಂಗಳೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. | 67,47,000 |
| 14 | ಮೆ। ಗೌರವ್ ಗಾರ್ಡನ್, ಮಂಗಳೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. | 60,00,000 |
| | ಗದಗ ಜಿಲ್ಲೆ | |
| 15 | ಮೆ॥ ಪಾರ್ವತಿ ಟೂರಿಸ್ಟ್ ಹೋಟೆಲ್ & ಲಾಡ್ಜಿಂಗ್, ಹಳ್ಳಿಕೆರೆ ಗ್ರಾಮ, ಮುಂಡರಗಿ ತಾಲ್ಲೂಕು, ಗದಗ ಜಿಲ್ಲೆ | 95,00,000 |
| | ಒಟ್ಟು | **9,33,44,040** |

2019-20ನೇ ಸಾಲಿನಲ್ಲಿ 2015-20ರ ಪ್ರವಾಸೋದ್ಯಮ ನೀತಿಯನ್ವಯ ಹೋಟೆಲ್/ರೆಸಾರ್ಟ್ಸ್ ಯೋಜನೆಗಳಿಗೆ ಸಹಾಯಧನವನ್ನು ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ ರವರಿಗೆ ಬಿಡುಗಡೆ ಮಾಡಿರುವ ವಿವರ.

(ರೂ.ಲಕ್ಷಗಳಲ್ಲಿ)

| ಕ್ರಮ ಸಂ | ಹೋಟೆಲ್/ರೆಸಾರ್ಟ್ಸ್ ಯೋಜನೆಗಳ ಹೆಸರು ಮತ್ತು ವಿಳಾಸ | ಸಹಾಯಧನ ಬಿಡುಗಡೆ ಮಾಡಿರುವ ಮೊತ್ತ |
|---|---|---|
| | ಕೊಡಗು ಜಿಲ್ಲೆ | |
| 1 | ಮೆ॥ ಗ್ರೀನ್ ಫೀಲ್ಡ್ ರೇಸಾರ್ಟ್, ವಿರಾಜೊಪೇಟೆ ತಾಲ್ಲೂಕು ಕೊಡಗು ಜಿಲ್ಲೆ | 60,00,000 |
| | ದಕ್ಷಿಣ ಕನ್ನಡ ಜಿಲ್ಲೆ | |
| 2 | ಮೆ: ಹೇರಂಭ ಕಂಫರ್ಟ್ಸ್, ತೊಕ್ಕೊಟ್ಟು, ಪೇರ್ಮನ್ನೂರ ಗ್ರಾಮ, ಮಂಗಳೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. | 58,97,000 |
| 3 | ಮೆ: ವಿಕಾಸ್ ಅಸೋಸಿಯೇಟ್ಸ್ ವಿಶ್ರಮ ಹಳೆ ಅಂಚೆ ರಸ್ತೆ ಸೂರತ್ಕಲ್ ಮಂಗಳೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ | 56,51,000 |
| 4 | ಮೆ: ಟೈಗರ್ ಹಿಲ್ ರೆಸ್ಟರ್ಟ್ ಅಶ್ವತುರ ನೆಲ್ಲಿಗುಡ್ಡೆ ತೆಂಕ ಮಿಜಾರ ಗ್ರಾಮ, ಮೂಡಬಿದ್ರಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ | 60,00,000 |
| | ಉತ್ತರ ಕನ್ನಡ ಜಿಲ್ಲೆ | |
| 5 | ಮೆ: ಬಾಬುರಾವ್ ಪ್ಯಾಲೇಸ್, ಯಲ್ಲಾಪುರ ರಸ್ತೆ, ಹಳಿಯಾಳ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ | 39,54,516 |
| 6 | ಮೆ: ಹೋಟೆಲ್ ಅಮೃತ ಓರಾ, ಲಾಡ್ಜ್ & ರೆಸ್ಟೋರೆಂಟ್, ಕಾರವಾರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ | 60,00,000 |
| | ಬೆಳಗಾವಿ ಜಿಲ್ಲೆ | |
| 7 | ಮೆ: ಹೋಟೆಲ್ ಶ್ರೀರಾಮ್ ರೆಸ್ಟೋರೆಂಟ್, ಸರ್ವೆ ನಂ.54/10, ಸಾ॥ ಸುತಗಟ್ಟಿ ಗ್ರಾಮ, ಬೆಳಗಾವಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 60,26,000 |
| 8 | ಮೆ: ಹೋಟೆಲ್ ಶ್ರೀ ತನಿಷ್ಕಾ ಲಾಡ್ಜಿಂಗ್ ಮತ್ತು ಬೋರ್ಡಿಂಗ್, ಅಡಹಳ್ಳಿ ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 56,00,000 |
| 9 | ಮೆ: ಹೋಟೆಲ್ ಜಿ.ಟಿ.ಬಾರ್ ಅಂಡ್ ರೆಸ್ಟೋರೆಂಟ್, ರಕ್ಷಿ, ಹುಕ್ಕೇರಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 55,01,000 |
| 10 | ಮೆ: ಹೋಟೆಲ್ ಎ7 ಲಾಡ್ಜಿಂಗ್ ಅಂಡ್ ಬೋರ್ಡಿಂಗ್, ಸಂಕೇಶ್ವರ ತಾ: ಹುಕ್ಕೇರಿ, ಬೆಳಗಾವಿ ಜಿಲ್ಲೆ | 61,10,823 |
| 11 | ಮೆ: ಹೋಟೆಲ್ ಶ್ರೀಫಲ್ ರೆಸಿಡೆನ್ಸಿ, ಕಾಗವಾಡ, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 64,25,000 |

| ಕ್ರಮ ಸಂ | ಹೋಟೆಲ್/ರೆಸಾರ್ಟ್ಸ್ ಯೋಜನೆಗಳ ಹೆಸರು ಮತ್ತು ವಿಳಾಸ | ಸಹಾಯಧನ ಬಿಡುಗಡೆ ಮಾಡಿರುವ ಮೊತ್ತ |
|---|---|---|
| 12 | ಮೆ: ಹೋಟೆಲ್ ಆದರ್ಶ ರೆಸಿಡೆನ್ಸಿ, ಮುಗಳಖೋಡ, ರಾಯಭಾಗ ತಾಲ್ಲೂಕು, ಬೆಳಗಾವಿ ಜಿಲ್ಲೆ | 50,53,250 |
| | ಧಾರವಾಡ ಜಿಲ್ಲೆ | |
| 13 | ಮೆ: ವೈಷ್ಣವಿ ಗಾರ್ಡನ್ & ರೆಸ್ಟೋರೆಂಟ್, ಸರ್ವೆ ನಂ.57/1, ಬುಡರಶಿಂಗಿ ಗ್ರಾಮ, ಹುಬ್ಬಳ್ಳಿ ತಾಲ್ಲೂಕು, ಧಾರವಾಡ ಜಿಲ್ಲೆ | 55,35,600 |
| 14 | ಮೆ: ವಿಶ್ವ ಹೋಟೆಲ್ & ರೆಸಾರ್ಟ್ಸ್, ಫ್ಲಾಟ್ ನಂ.33/ಎ, ಸರ್ವೆ ನಂ.208, ಮಮ್ಮಿಗಟ್ಟಿ ಇಂಡಸ್ಟ್ರಿಯಲ್ ಏರಿಯಾ, ಪಿ.ಬಿ.ರಸ್ತೆ, ಧಾರವಾಡ ತಾಲ್ಲೂಕು, ಧಾರವಾಡ ಜಿಲ್ಲೆ | 59,87,439 |
| 15 | ಮೆ: ದ್ವಾರವಾಟ್, ಚಿಕ್ಕಮಲ್ಲಿಗವಾಡ ಗ್ರಾಮ, ಸರ್ವೆ ನಂ.62/ಬಿ1 + 2, ಫ್ಲಾಟ್ ನಂ.177&178, ಧಾರವಾಡ ತಾಲ್ಲೂಕು, ಧಾರವಾಡ ಜಿಲ್ಲೆ | 60,00,000 |
| 16 | ಮೆ: ಹೋಟೆಲ್ ದಿ ಕಲ್ಟ್, ಸರ್ವೆ ನಂ.120/1, 233/2, ವರೂರ ಗ್ರಾಮ, ಹುಬ್ಬಳ್ಳಿ ತಾಲ್ಲೂಕು, ಧಾರವಾಡ ಜಿಲ್ಲೆ | 60,76,200 |
| 17 | ಮೆ: ಹೆಲ್ದಿ ಕೌಂಟಿ ರೆಸಾರ್ಟ್ಸ್, ಹುಬ್ಬಳ್ಳಿ, ಹುಬ್ಬಳ್ಳಿ ತಾಲ್ಲೂಕು, ಧಾರವಾಡ ಜಿಲ್ಲೆ | 60,00,000 |
| 18 | ಮೆ: ಸಂಜೀವ ಎಜುಕೇಷನ್ & ಕಲ್ಚರಲ್ ಟೂರಿಸಂ ಸೆಂಟರ್/ಮ್ಯೂಸಿಯಂ/ ಗ್ಯಾಲರಿ" ಸರ್ವೆ ನಂ.168/1, ಅಂಚಟಗೇರಿ ಗ್ರಾಮ, ಹುಬ್ಬಳ್ಳಿ ತಾಲ್ಲೂಕು, ಧಾರವಾಡ ಜಿಲ್ಲೆ | 65,00,000 |
| | ಕಲಬುರಗಿ ಜಿಲ್ಲೆ | |
| 19 | ಮೆ: ಗೋಪಾಲ ಹೋಟೆಲ್ ಬೋರ್ಡಿಂಗ್ & ಲಾಡ್ಜಿಂಗ್, ಚಿತ್ತಾಪುರ ಪಟ್ಟಣ, ಚಿತ್ತಾಪೂರ ತಾಲ್ಲೂಕು, ಕಲಬುರಗಿ ಜಿಲ್ಲೆ | 60,00,000 |
| | ಗದಗ ಜಿಲ್ಲೆ | |
| 20 | ಮೆ: ಲಕ್ಷ್ಮೀ ಲಾಡ್ಜ್ ಬಾರ್ & ರೆಸ್ಟೋರೆಂಟ್, ಮುಂಡರಗಿ ಪಟ್ಟಣ, ಮುಂಡರಗಿ ತಾಲ್ಲೂಕು, ಗದಗ ಜಿಲ್ಲೆ | 57,32,700 |
| | ಯಾದಗಿರಿ ಜಿಲ್ಲೆ | |
| 21 | ಮೆ: ವೈಷ್ಣವಿ ಹೋಟೆಲ್, ಬೋರ್ಡಿಂಗ್ ಮತ್ತು ಲಾಡ್ಜಿಂಗ್, ಶಹಾಪುರ ತಾಲ್ಲೂಕು, ಯಾದಗಿರಿ ಜಿಲ್ಲೆ | 1,20,00,000 |
| | ಕೊಪ್ಪಳ ಜಿಲ್ಲೆ | |
| 22 | ಮೆ: ಹೋಟೆಲ್ ಸಂಗಮ ಬೋರ್ಡಿಂಗ್ & ಲಾಡ್ಜಿಂಗ್, ಇಂಡಸ್ಟ್ರಿಯಲ್ ಏರಿಯಾ, ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ. | 1,20,00,000 |
| | ಒಟ್ಟು | **14,00,50,528** |

2020-21ನೇ ಸಾಲಿನಲ್ಲಿ 2015-20ರ ಪ್ರವಾಸೋದ್ಯಮ ನೀತಿಯ ಪ್ರಕಾರ ಇಲಾಖೆಯಲ್ಲಿ ಸಹಾಯಧನ ಕೋರಿ ಈವರೆಗೆ ಸ್ವೀಕೃತವಾಗಿರುವ ಹೋಟೆಲ್/ರೆಸಾರ್ಟ್ಸ್ ಯೋಜನೆಗಳಿಗೆ ಬಿಡುಗಡೆ ಮಾಡಿರುವ ಅನುದಾನದ ವಿವರ.

| ಕ್ರ. ಸಂ | ಹೋಟೆಲ್ ಯೋಜನೆಗಳ ಹೆಸರು ಮತ್ತು ವಿಳಾಸ | ಬಿಡುಗಡೆ ಮಾಡಬೇಕಾದ ಸಹಾಯಧನ ಮೊತ್ತ (ರೂ.ಗಳಲ್ಲಿ) |
|---|---|---|
| | ಕೊಪ್ಪಳ ಜಿಲ್ಲೆ | |
| 1 | ಮೆ: ಹೋಟೆಲ್ ಪೂರ್ವಿ ರೆಸಿಡೆನ್ಸಿ, ಸಾ॥ಉಪ್ಪಲದಿನ್ನಿ, ಹಿರೇವಂಕಲಕುಂಟಾ, ಯಲಬುರ್ಗಾ ತಾಲ್ಲೂಕು, ಕೊಪ್ಪಳ ಜಿಲ್ಲೆ | 76,66,302.00 |
| | ಬಳ್ಳಾರಿ ಜಿಲ್ಲೆ | |
| 2 | ಮೆ: ಹೋಟೆಲ್ ಶ್ರೀ ಲಕ್ಷ್ಮೀ ವೆಂಕಟೇಶ್ವರ ಲಾಡ್ಜ್, ಸರ್ವೆ ನಂ.227 ರಿಂದ 232, ಅದೋನಿ ರಸ್ತೆ, ಸಿರಗುಪ್ಪ ತಾಲ್ಲೂಕು, ಬಳ್ಳಾರಿ ಜಿಲ್ಲೆ. | 1,04,07,144.00 |
| 3 | ಮೆ: ಹೋಟೆಲ್ ಅಶ್ವಮೇಧ ರೆಸಿಡೆನ್ಸಿ, ವಾರ್ಡ್ ಸಂಖ್ಯೆ 06, ಡೋರ್ ನಂ.1308ಎಫ್/111ಎ ಮತ್ತು 1308ಎಫ್/ 112 ಹಾಗೂ 1308ಎಫ್/113, ಕೂಡ್ಲಿಗಿ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ | 1,20,00,000.00 |
| | ಕಲಬುರಗಿ ಜಿಲ್ಲೆ | |
| 4 | ಮೆ: ಎಂ.ಕೆ.ಬೋರ್ಡಿಂಗ್ ಲಾಡ್ಜಿಂಗ್ ಮತ್ತು ರೆಸ್ಟೋರೆಂಟ್, ಕಲಬುರಗಿ ತಾಲ್ಲೂಕು, ಕಲಬುರಗಿ ಜಿಲ್ಲೆ | 90,00,000.00 |
| 5 | ಮೆ॥ಜೈ ಭವಾನಿ ಬೋರ್ಡಿಂಗ್ & ಲಾಡ್ಜಿಂಗ್, ಕೂಡ್ಲಿಗಿ, ಚಿಂಚೋಳಿ ತಾಲ್ಲೂಕು, ಕಲಬುರಗಿ ಜಿಲ್ಲೆ | 94,14,800.00 |
| | ಬಾಗಲಕೋಟೆ ಜಿಲ್ಲೆ | |
| 6 | ಮೆ: ಬಾಗಲಕೋಟೆ ರೆಸಾರ್ಟ್ಸ್, ಬೋರ್ಡಿಂಗ್ & ಲಾಡ್ಜಿಂಗ್, ಸಿದ್ಧಾಪುರ ಗ್ರಾಮ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 75,00,000.00 |
| 7 | ಮೆ: ಹೋಟೆಲ್ ರಾಯಲ್ ರೆಸಿಡೆನ್ಸಿ, ತೇರದಾಳ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 75,00,000.00 |
| | ಬೆಳಗಾವಿ ಜಿಲ್ಲೆ | |
| 8 | ಮೆ: ಹೋಟೆಲ್ ಶ್ರೀ ಸಾಯಿ ಲಾಡ್ಜಿಂಗ್ & ರೆಸ್ಟೋರೆಂಟ್, ಅಂಕಲಿ ರಸ್ತೆ, ರಾಯಭಾಗ ತಾಲ್ಲೂಕು, ಬೆಳಗಾವಿ ಜಿಲ್ಲೆ | 60,05,000.00 |
| 9 | ಮೆ: ಹೋಟೆಲ್ ಶಿವಶಕ್ತಿ ಲಾಡ್ಜಿಂಗ್ ಬೋರ್ಡಿಂಗ್ ಅಂಡ್ ರೆಸ್ಟೋರೆಂಟ್, ಗಟನಟ್ಟಿ ಕ್ರಾಸ್, ಅಥಣಿ, ಬೆಳಗಾವಿ ಜಿಲ್ಲೆ | 38,20,100.00 |
| 10 | ಮೆ: ನಕ್ಷತ್ರ ಲಾಡ್ಜಿಂಗ್ & ಬೋರ್ಡಿಂಗ್ ಯಾದವಾಡ ತಾ॥ಗೋಕಾಕ್, ಬೆಳಗಾವಿ ಜಿಲ್ಲೆ. | 90,51,500.00 |
| | ಧಾರವಾಡ ಜಿಲ್ಲೆ | |
| 11 | ಮೆ॥ ಹೋಟೆಲ್ ಸಚ್ಚಿದಾನಂದ ಲಾಡ್ಜಿಂಗ್ & ರೆಸ್ಟೋರೆಂಟ್, ಪಾಲಿಕೊಪ್ಪ(ರಾ.ಹೆ-04) ಸರ್ವೇ ನಂ-75/2, ಅಗಡಿ ಗ್ರಾಮ ಪಂಚಾಯತ್ ವ್ಯಾಪ್ತಿ, ತಾ॥ ಹುಬ್ಬಳ್ಳಿ, ಜಿ॥ ಧಾರವಾಡ | 57,42,000.00 |

| ಕ್ರ. ಸಂ | ಹೋಟೆಲ್ ಯೋಜನೆಗಳ ಹೆಸರು ಮತ್ತು ವಿಳಾಸ | ಬಿಡುಗಡೆ ಮಾಡಬೇಕಾದ ಸಹಾಯಧನ ಮೊತ್ತ (ರೂ.ಗಳಲ್ಲಿ) |
|---|---|---|
| | ಉತ್ತರ ಕನ್ನಡ ಜಿಲ್ಲೆ | |
| 12 | ಮೆ: ಹೋಟೆಲ್ ರಾಯಲ್ ವ್ಯಾಲಿ, ಉತ್ತರ ಕನ್ನಡ ಜಿಲ್ಲೆ, ಕುಮಟಾ ತಾಲ್ಲೂಕು | 41,80,000.00 |
| 13 | ಮೆ॥ಹೋಟೆಲ್ ಕೀರ್ತಿ ಲಾಡ್ಜಿಂಗ್ & ಹೋಟೆಲ್, ಉತ್ತರ ಕನ್ನಡ ಜಿಲ್ಲೆ, ಶಿರಸಿ ತಾಲ್ಲೂಕು. | 90,44,000.00 |
| 14 | ಮೆ॥ ಹೋಟೆಲ್ ಅಲೇಕಾ ಗೇಟ್‌ವೇ (ಹೋಟೆಲ್ ರಾಘವೇಂದ್ರ ಕಂಚುಗಾರ), ಉತ್ತರ ಕನ್ನಡ ಜಿಲ್ಲೆ, ಶಿರಸಿ ತಾಲ್ಲೂಕು | 60,00,000.00 |
| 15 | ಮೆ॥ ರಾಜಶೇಖರ ರೆಸಾರ್ಟ್ಸ್, ಹಳಿಯಾಳ, ಹಲಸಿ ಗ್ರಾಮ ಕೆಸರೊಳ್ಳಿ, ಉತ್ತರ ಕನ್ನಡ ಜಿಲ್ಲೆ | 45,35,266.00 |
| | ಹಾಸನ ಜಿಲ್ಲೆ | |
| 16 | ಮೆ॥ ಶ್ರೀ ಲಕ್ಷ್ಮೀ ಪ್ರಾಪರ್ಟೀಸ್, ಅರಕಲಗೂಡು ತಾಲ್ಲೂಕು ಟೌನ್, ಹಾಸನ ಜಿಲ್ಲೆ | 90,00,000.00 |
| | ವಿಜಯಪುರ ಜಿಲ್ಲೆ | |
| 17 | ಮೆ॥ ಹೋಟೆಲ್ ಬಿ.ಕೆ.ಟಿ ಬೋರ್ಡಿಂಗ್, ಲಾಡ್ಜಿಂಗ್ ಮತ್ತು ರೆಸ್ಟೋರೆಂಟ್, ಸಿಂಧಗಿ ಪಟ್ಟಣ ಸಿಂಧಗಿ ತಾಲ್ಲೂಕು, ವಿಜಯಪುರ | 75,39,000.00 |
| 18 | ಮೆ॥ ಹೋಟೆಲ್ ಅರ್ಪಿತಾ ಬೋರ್ಡಿಂಗ್, ಲಾಡ್ಜಿಂಗ್ ಮತ್ತು ರೆಸ್ಟೋರೆಂಟ್, ಸಿಂಧಗಿ, ವಿಜಯಪುರ ಜಿಲ್ಲೆ | 62,21,800.00 |
| 19 | ಮೆ॥ ಹೋಟೆಲ್ ಪ್ರಕಾಶ ಬೋರ್ಡಿಂಗ್, ಲಾಡ್ಜಿಂಗ್ ಮತ್ತು ರೆಸ್ಟೋರೆಂಟ್, ಇಂಚಗೇರಿ, ಇಂಡಿ ತಾಲ್ಲೂಕು, ವಿಜಯಪುರ ಜಿಲ್ಲೆ | 46,24,064.00 |
| 20 | ಮೆ॥ ಹೋಟೆಲ್ ಮಿಲನ್ ಇನ್ ಬೋರ್ಡಿಂಗ್, ಲಾಡ್ಜಿಂಗ್ ಮತ್ತು ರೆಸ್ಟೋರೆಂಟ್, ವಿಜಯಪುರ, ವಿಜಯಪುರ ಜಿಲ್ಲೆ | 75,00,000.00 |
| | ಉಡುಪಿ ಜಿಲ್ಲೆ | |
| 21 | ಮೆ॥ ಹೋಟೆಲ್ ಗ್ರೀನ್ ಪಾರ್ಕ್ (ವೈಟ್ ಲೋಟಸ್), ಮೂಡನಿಡಂಬೂರು, ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ | 60,00,000.00 |
| 22 | ಮೆ: ಕೆ1 Commercial ಹೋಟೆಲ್ ಮತ್ತು ಹಾಸ್ಪಿಟಾಲಿಟಿ ಸರ್ವೀಸಸ್, ಮಲ್ಲಾರು ಗ್ರಾಮ, ಸರ್ವೇ ನಂ. 40/2P3, 40/2P5, 40/2P4 ರಲ್ಲಿ, ಎನ್.ಹೆಚ್ 66, ಕಾಪು ಉಡುಪಿ | 60,00,000.00 |
| 23 | ಮೆ॥ ಶ್ರೀ ಕೃಷ್ಣಯ್ಯ ಶೆಟ್ಟಿ, ಹೋಟೆಲ್ ಬೋರ್ಡಿಂಗ್ ಮತ್ತು ಲಾಡ್ಜಿಂಗ್, ಸ.ನಂ.354/4B1, ಕೋಟೇಶ್ವರ, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ | 60,00,000.00 |

| ಕ್ರ. ಸಂ | ಹೋಟೆಲ್ ಯೋಜನೆಗಳ ಹೆಸರು ಮತ್ತು ವಿಳಾಸ | ಬಿಡುಗಡೆ ಮಾಡಬೇಕಾದ ಸಹಾಯಧನ ಮೊತ್ತ (ರೂ.ಗಳಲ್ಲಿ) |
|---|---|---|
| | ಮಂಡ್ಯ ಜಿಲ್ಲೆ | |
| 24 | ಮೆ॥ ಹೋಟೆಲ್ ಹೆಚ್. ಎಂ. ರೆಸಾರ್ಟ್ಸ್, ಪಾಲಹಳ್ಳಿ ಗ್ರಾಮ, ಶ್ರೀರಂಗಪಟ್ಟಣ ತಾಲ್ಲೂಕು | 75,00,000.00 |
| 25 | ಮೆ॥ ಕಳಿಂಗ ಟವರ್ನ್ , ಕಾಳಿಂಗನಹಳ್ಳಿ ಗ್ರಾಮ, ನಾಗಮಂಗಲ ತಾಲ್ಲೂಕು, ಮಂಡ್ಯ | 90,00,000.00 |
| | ಕೊಪ್ಪಳ ಜಿಲ್ಲೆ | |
| 26 | ಮೆ॥ ಹೋಟೆಲ್ ಕೆ.ಎಮ್.ಎಸ್ ಕಂಫರ್ಟ್ಸ್ & ಶಾಪಿಂಗ್ ಕಾಂಪ್ಲೆಕ್ಸ್, ಕೊಪ್ಪಳ ತಾಲ್ಲೂಕು, ಕೊಪ್ಪಳ ಜಿಲ್ಲೆ | 1,08,56,400.00 |
| | ಒಟ್ಟು | **19,21,07,376.00** |